# ಸೌಭಾಗ್ಯವತಿ

[ಸಾಮಾಜಿಕ ಕಾದಂಬರಿ]

ಎಂ. ವಿ. ಸೀತಾರಾಮಯ್ಯ

ಬೆಂಗಳೂರು ನಗರ
೧೯೫೧

# ಬಿನ್ನಹ

ನಾನು ೧೯೪೩ರಲ್ಲಿ ರಚಿಸಿದ 'ಭಾಗ್ಯಲಕ್ಷ್ಮಿ' ಕಾದಂಬರಿಯ ಉತ್ತರ ಕಥೆ ಈ ಕಾದಂಬರಿ. ಅದು ಒಂದು ನಡೆದ ಸಂಗತಿಯ ಆಧಾರದಮೇಲೆ ಕಟ್ಟಿದ್ದು; ಇದು ಸಂಪೂರ್ಣವಾಗಿ ಕಾಲ್ಪನಿಕ. ಅದರಲ್ಲಿ, ಕಥೆಯ ನಾಯಕ ಕಡುಬಡವ ನಾರಾಯಣಮೂರ್ತಿ ಶ್ರೀಮಂತನಾಗಿದ್ದು ತನ್ನ ಕಪ್ಪು ಹೆಂಡತಿ ಜಯಲಕ್ಷ್ಮಿಯನ್ನು ತಿರಸ್ಕಾರ ಮಾಡಿದ್ದಾಗ, ಅವಳು ತನ್ನ ಅತ್ತಿಗೆ ಗೌರಿಯ ಒತ್ತಾಸೆಯಿಂದ ಸಾಹಸಮಾಡಿ ಹೇಗೆ ಗಂಡನ ಮನಸ್ಸನ್ನು ಗೆದ್ದು ಅವನ ಭಾಗದ 'ಭಾಗ್ಯಲಕ್ಷ್ಮಿ'ಯಾದಳು ಎಂಬ ಸಂಗತಿಯನ್ನು ನಿರೂಪಿಸಿದೆ. ಅವರ ಹಿರಿಯ ಮಗಳೆ ಭಾಗ್ಯಲಕ್ಷ್ಮಿ; ಅವಳ ಮದುವೆಯಲ್ಲಿ ಕಥೆ ಮುಗಿದಿದೆ

ಮದುವೆಯಾಗಿ ಗಂಡನ ಮನೆಗೆ ಹೋದ ಭಾಗ್ಯಲಕ್ಷ್ಮಿಯ ಬದುಕಿನ ಕಥೆಯೆ ಈ ಕಾದಂಬರಿಯ ವಸ್ತು. ಆ ಕಾದಂಬರಿಯ ಮುಖ್ಯ ವ್ಯಕ್ತಿಗಳಾದ ನಾರಾಯಣಮೂರ್ತಿ, ಜಯಲಕ್ಷ್ಮಿ, ಗೌರಿ—ಇವರು ಹಿರಿಯರಾಗಿ ಈ ಕಾದಂಬರಿಯಲ್ಲಿಯೂ ಸುಳಿಯುತ್ತಾರೆ. ಇಷ್ಟೇ ಹೊರತು, ಆ ಕಥೆಯಿಂದ ಈ ಕಥೆ ಭಿನ್ನವಾದುದು; ಸ್ವಯಂ ಪೂರ್ಣವಾದುದು.

'ಭಾಗ್ಯಲಕ್ಷ್ಮಿ'ಯ ನಾರಾಯಣಮೂರ್ತಿ ತನ್ನ ಹೆಂಡತಿ ಜಯ ಲಕ್ಷ್ಮಿಯನ್ನು ಕೆಲಕಾಲ ತಿರಸ್ಕರಿಸಿದ್ದಕ್ಕೆ ಅವಳ ಕಪ್ಪು ಕಾರಣವಾಯಿತು. ಹೆಂಡತಿ ಎಲ್ಲರೂ ಒಪ್ಪುವಷ್ಟಿಗೆ ಚೆಲುವೆಯಾಗಿದ್ದೂ ಅವಳನ್ನು ನಿಷ್ಕಾರಣವಾಗಿ ತಿರಸ್ಕಾರ ಮಾಡಿದರೆ? ಸಮಾಜದಲ್ಲಿ ಇಂತಹ ತಿರಸ್ಕೃತೆ ಯರೂ ಇಲ್ಲದೆ ಇಲ್ಲ. ಅವರು 'ನಮ್ಮ ಹಣೆಯ ಬರಹ' ಎಂದು ತೆಪ್ಪನಿರಬೇಕೆ, ಇಲ್ಲವೆ ತಿರಸ್ಕಾರ ಮಾಡಿದ ಗಂಡನನ್ನು ಒಲಿಸಿಕೊಂಡು ಗೆಲ್ಲುವ ಸಾಹಸ ಮಾಡಬೇಕೆ ಎಂಬ ಪ್ರಶ್ನೆಗಳಿಗೆ ಉತ್ತರವೇ ಈ ಕಾದಂ ಬರಿಯ ರಚನೆಗೆ ಪ್ರೇರಣೆ.

ಈ ಕಥೆಗೆ ಬೇರೆಯ ಪಾತ್ರಗಳನ್ನು ಹೂಡುವುದಕ್ಕಿಂತ ಸಿದ್ಧವಾದ ಕೆಲವು ಪಾತ್ರಗಳನ್ನೇ ಹೂಡುವುದು ಮೇಲೆಂದು ತೋರಿ, ಹಾಗೆ ಮಾಡಲಾಗಿದೆ.

‘ಭಾಗ್ಯಲಕ್ಷ್ಮಿ’ಯನ್ನು ಬರೆದ ತರುಣದಲ್ಲಿಯೆ ಬರೆಯಬೇಕೆಂದಿದು ಕೃತಿ ಇದು. ಮಿತ್ರರೊಬ್ಬರ ವಿಶ್ವಾಸದ ಒತ್ತಾಯವಿಲ್ಲದಿದ್ದರೆ ಇದ್ದ ಬಹುಶಃ ರಚಿತವಾಗುತ್ತಲೇ ಇರಲಿಲ್ಲವೇನೋ. ಆದ್ದರಿಂದ, ಇದರ ರಚನೆಗೂ ಪ್ರಕಾಶನಕ್ಕೂ ಕಾರಣಕರ್ತರಾದ ಆ ಮಿತ್ರರಿಗೆ ನನ್ನ ವಂದನೆಗಳು ಸಲ್ಲಬೇಕಾಗಿವೆ.

ಗ್ರಂಥವನ್ನು ಬೇಗನೆ ಅಂದವಾಗಿ ಅಚ್ಚು ಮಾಡಿಕೊಟ್ಟ ರಂಗನಾಥ ಪ್ರೆಸ್ಸಿನ ಒಡೆಯರಿಗೂ ವಂದನೆಗಳು.

ಮಾರ್ಚಿ, ೧೯೫೭<br>ಬೆಂಗಳೂರು ನಗರ

ಮ್ಯ. ವೆಂ. ಸೀತಾರಾಮಯ್ಯ

# ಸೌಭಾಗ್ಯವತಿ

---

## ೧
## ಅಳಿಯನ ಅನಿರೀಕ್ಷಿತ ಆಗಮನ

ಕೃಷ್ಣಸ್ವಾಮಿ ಮುಂದಾಗಿ ಕಾಗದ ಹಾಕದೆ ತನ್ನ ಹೆಂಡತಿ ಭಾಗ್ಯಲಕ್ಷ್ಮಿಯನ್ನೂ ಕರೆದುಕೊಂಡು ಬಂದದ್ದನ್ನು ಕಂಡು ನಾರಾಯಣಮೂರ್ತಿಗಳ ಮನೆಯವರಿಗೆಲ್ಲ ಆಶ್ಚರ್ಯವಾಯಿತು.

ನಾರಾಯಣಮೂರ್ತಿಗಳು ಆಗ ತಾನೆ ಸಂಧ್ಯಾವಂದನೆಯನ್ನು ಮಾಡಿ ಮುಗಿಸಿ, ಗಟ್ಟಿಯಾಗಿ ಸ್ತೋತ್ರಗಳನ್ನು ಪಠಿಸುತ್ತ, ವಿಶಾಲವಾದ ಕಂಬಸಾಲಿನ ತೊಟ್ಟಿಯಲ್ಲಿ ಶತಪಥ ತಿರುಗುತ್ತಿದ್ದರು. ಜಯಲಕ್ಷ್ಮಮ್ಮನವರು ಒಳಗೆ ಅಡಿಗೆಯ ಕೆಲಸದಲ್ಲಿ ನಿರತರಾಗಿದ್ದರು. ರಾಮಮೂರ್ತಿ, ವೆಂಕಟೇಶಮೂರ್ತಿ ಮೇಜಿನ ಮುಂದೆ ಕುಳಿತು ಪಾಠಗಳನ್ನು ಓದಿಕೊಳ್ಳುತ್ತಿದ್ದರು.

ಅಳಿಯ ಮಗಳು ಬಂದದ್ದನ್ನು ಕಂಡು ಸಂತೋಷದಿಂದ ಹಿಗ್ಗುತ್ತ, "ಯಾವಾಗ ಬಂದೆ ಕೃಷ್ಣಸ್ವಾಮಿ? ಬಾ, ಕುಳಿತುಕೋ. ಚೆನ್ನಾಗಿದ್ದೀಯಾ ಅಮ್ಮ, ಭಾಗ್ಯ?" ಎಂದು ನಾರಾಯಣಮೂರ್ತಿಗಳು ಇಬ್ಬರನ್ನೂ ಪ್ರಶ್ನಿಸಿದರು.

ತಲೆ ತಗ್ಗಿಸಿ ಓದುತ್ತ ಕುಳಿತಿದ್ದ ರಾಮು ವೆಂಕಟೇಶ ಇತ್ತ ತಿರುಗಿದರು: "ಅಮ್ಮಾ ಅಮ್ಮಾ, ಭಾವ ಅಕ್ಕ ಬಂದಿದಾರೆ!" ಎಂದು ಕೂಗಿಕೊಳ್ಳುತ್ತ ಅವರ ಬರವಿನ ಸಂತೋಷದ ಸುದ್ದಿಯನ್ನು ತಿಳಿಸಲು ಅಡಿಗೆಯ ಮನೆಯ ಕಡೆಗೆ ಓಡಿದರು. ಅವರ ಕೂಗು ಕೇಳಿಯೇ ಜಯಲಕ್ಷ್ಮಮ್ಮ ತೊಟ್ಟಿಗೆ ಬಂದರು.

ನಾರಾಯಣಮೂರ್ತಿಗಳ ಪ್ರಶ್ನೆಗೆ—"ಇದೇ ತಾನೆ ಬಂದೆ"—ಎಂದು ಕೃಷ್ಣಸ್ವಾಮಿ ಉತ್ತರ ಹೇಳಿ, ಗಾಡಿಯವನು ಹೊತ್ತು ತಂದಿದ್ದ ಹಾಸಿಗೆ ಟ್ರಂಕುಗಳನ್ನು ಒಂದು ಕಡೆ ಇಡಿಸಿ, ಚಾಪೆಯ ಮೇಲೆ ಕುಳಿತನು; ಭಾಗ್ಯಲಕ್ಷ್ಮಿ "ಚೆನ್ನಾಗಿದ್ದೇನೆ" ಎಂದು ಹೇಳಿ, ಒಳಕ್ಕೆ ಹೋಗುವಷ್ಟರಲ್ಲಿ ತಾಯಿಯೇ ಒಳಗಿನಿಂದ ಬಂದದ್ದನ್ನು ಕಂಡಳು; ಮೊದಲು ತಾಯಿಗೆ ನಮಸ್ಕಾರಮಾಡಿ, ಆಮೇಲೆ ತಂದೆಗೆ ನಮಸ್ಕಾರ ಮಾಡಿದಳು. ಇದು ಅವಳು ತನ್ನ ತಂದೆತಾಯಿಗಳಿಂದ ಕಲಿತಿದ್ದ ಪೂರ್ವಾಚಾರದ ನಡತೆಗಳಲ್ಲಿ ಒಂದು. ಸ್ವಲ್ಪ ಈಗಿನ ಕಾಲದವನಾಗಿದ್ದ ಕೃಷ್ಣಸ್ವಾಮಿ, "ಊರು ಬಿಟ್ಟು ಹೋಗುವಾಗ ತಾಯಿತಂದೆಗಳಿಗೆ ನಮಸ್ಕಾರ ಮಾಡುವುದು ಸರಿಯೆ. ಊರಿಗೆ ಬಂದಾಗಲೂ ಮಾಡುವ ಈ ವಿಚಿತ್ರ ಸಂಪ್ರದಾಯ ಎಲ್ಲಿಯದು?" ಎಂದು ಒಳಗೊಳಗೇ ನಕ್ಕ.

ಇತ್ತ ನಾರಾಯಣಮೂರ್ತಿಗಳು ಅಳಿಯನ ಕ್ಷೇಮ ಸಮಾಚಾರವನ್ನು ವಿಚಾರಿಸಲು ಮೊದಲು ಮಾಡಿದರು; ಅತ್ತ ಭಾಗ್ಯಲಕ್ಷ್ಮಿ ಬಚ್ಚಲ ಮನೆಗೆ ಹೋಗಿ ಕಾಲು ತೊಳೆದುಕೊಂಡು, ರೈಲು ಪ್ರಯಾಣದ ಮೈಲಿಗೆಯ ಉಡಿಗೆತೊಡಿಗೆ ಕಳೆದು, ತಾಯಿ ಕೊಟ್ಟ ಮಡಿಯನ್ನುಟ್ಟು, ತಾಯಿಯನ್ನು ಅಡಿಗೆಯ ಮನೆಯೊಳಕ್ಕೆ ಹಿಂಬಾಲಿಸಿದಳು.

ನಾರಾಯಣಮೂರ್ತಿಗಳು ಕೇಳಿದರು: "ಊರಿಗೆ ಬರುತ್ತೇನೆಂದು ಒಂದು ಕಾಗದ ಹಾಕಿದ್ದರೆ ಸ್ಟೇಷನ್ನಿಗೆ ಯಾರನ್ನಾದರೂ ಕಳಿಸಿಕೊಡುತ್ತಿದ್ದೆ. ಇಲ್ಲದೆ ಹೋದರೆ ನಾನಾದರೂ ಬರುತ್ತಿದ್ದೆ. ಎಲ್ಲ ಆರೋಗ್ಯ ತಾನೆ?"

ಕೃಷ್ಣಸ್ವಾಮಿ: "ಆರೋಗ್ಯವಾಗಿಲ್ಲದೆ ಏನು, ಆರೋಗ್ಯವಾಗಿದೇವೆ."

"ಕಾಗದವೂ ಹಾಕದೆ ತುರುತಿನಲ್ಲಿ ಹೊರಟು ಬಂದಿದ್ದೀಯಲ್ಲ, ಅದಕ್ಕೆ ಕೇಳಿದೆ."

"ಸ್ವಲ್ಪ ಕೆಲಸ ಇತ್ತು, ಅದಕ್ಕಾಗಿ ಬಂದೆ."

"ಕಚೇರಿಯ ಆಡಿಟ್ ಕೆಲಸವೋ?"

"ಈಗ ಆಡಿಟ್ ಇಲಾಖೆಯಿಂದ ಬೇರೆ ಇಲಾಖೆಗೆ ವರ್ಗಮಾಡಿಸಿಕೊಂಡಿದೇನೆ. ಏಕೋ ಅಲ್ಲಿಯ ಕೆಲಸ ಬೇಸರವಾಯಿತು."

"ಓಹೋ ಹಾಗೋ, ನನಗೆ ತಿಳಿದಿರಲಿಲ್ಲ. ಈ ವರ್ಗದಿಂದ ಸಂಬಳದಲ್ಲಿ ಪ್ರಮೋಷನ್ ಏನಾದರೂ ಸಿಕ್ಕಿತೋ?"

"ಇಲ್ಲ. ಅಷ್ಟೇ. ಅರುವತ್ತು ರೂಪಾಯಿ."

ಕೃಷ್ಣಸ್ವಾಮಿಯ ಮಾತುಗಳಲ್ಲಿ ಅತೃಪ್ತಿಯ ಧ್ವನಿಯಿತ್ತು.

"ಈಗ ಬಂದ ಉದ್ದೇಶವೇನು?" ಎಂಬ ನಾರಾಯಣಮೂರ್ತಿಗಳ ಮುಂದಿನ ಪ್ರಶ್ನೆ ಅವರ ಮನಸ್ಸಿನಲ್ಲಿ ಮೂಡಿ ಬಾಯಿಂದ ಬರದಾಯಿತು. ಎಷ್ಟಾಗಲಿ ಅಳಿಯ; 'ಏಕೆ ಬಂದೆ' ಎಂಬ ಪ್ರಶ್ನೆಯಿಂದ ಅಪಚಾರವಾಗಬಹುದೆಂದು ಎಣಿಸಿ, ಅವರು ಸುಮ್ಮನಾದರು.

ಬೆಂಗಳೂರು ಜೀವನ, ಅದರ ಕಷ್ಟಸುಖ–ಇದರ ವಿಚಾರವಾಗಿ ಮಾವ ಅಳಿಯನ ಮಾತುಕತೆ ನಡೆಯುತ್ತಿತ್ತು. ಮಾವ ಕೇಳಿದ ಒಂದೆರಡು ಮಾತಿನ ಸಣ್ಣ ಪ್ರಶ್ನೆಗೆ ಅಳಿಯ ಬೆಂಗಳೂರು ಜೀವನದ ಕಷ್ಟವನ್ನು ಹತ್ತು ಮಾತುಗಳಲ್ಲಿ ವಿವರಿಸುತ್ತಿದ್ದ. ಎಷ್ಟೇ ಕಷ್ಟವಾದರೂ, ಬರುವ ಸಂಬಳದಲ್ಲಿ ಗಂಡ ಹೆಂಡಿರಿಬ್ಬರು ನೆಮ್ಮದಿಯಾಗಿ ಸಂಸಾರ ನಿರ್ವಹಿಸಬಹುದೆಂದು ವ್ಯವಹಾರಜ್ಞರಾದ ನಾರಾಯಣಮೂರ್ತಿಗಳ ಎಣಿಕೆ. ಆದರೂ, ಅಳಿಯನ ಮಾತುಗಳಿಂದ ಅವನು ಹಣ ಸಾಲದೆ ಏನೋ ಕಷ್ಟದಲ್ಲಿ ಸಿಲುಕಿದ್ದಾನೆಂದು ಊಹಿಸಿದರು ಅವನು ಕೇಳದೆಯೇ ಎಷ್ಟೋ ಸಲ ಅವರು ತಾವಾಗಿ ಅವನಿಗೆ ಧನಸಹಾಯ ಮಾಡಿದ್ದರು. ಹಿಂದೆಂದೂ ಅವನು ಹಣವನ್ನು ಬಾಯಿಬಿಟ್ಟು ಕೇಳಿದವನಲ್ಲ. ಅದ್ದರಿಂದ, ಹಣ ಕೇಳುವುದಕ್ಕಾಗಿ ಅವನು ಬಂದಿರಲಾರ. ಏಕೆ ಬಂದಿರಬಹುದು? ಭಾಗ್ಯಲಕ್ಷ್ಮಿ ಏನಾದರೂ ಬಸುರಿಯಾಗಿದ್ದು ಅವಳನ್ನು ಬಿಡುವುದಕ್ಕೆ ಬಂದಿರಬಹುದೆ? ಇದ್ದರೂ ಇರಬಹುದು. ಎಲ್ಲವೂ ತಾನಾಗಿ ಗೊತ್ತಾಗುತ್ತದೆ; ಇಲ್ಲದ ಪ್ರಶ್ನೆಯನ್ನು ಹಾಕಿ ಅಳಿಯನ ಮನಸ್ಸಿಗೆ ಅಸಮಾಧಾನವನ್ನೇಕೆ ಉಂಟುಮಾಡುವುದೆಂದು ನಾರಾಯಣಮೂರ್ತಿಗಳು ಬೇರೆ ವಿಷಯಗಳ ಪ್ರಸ್ತಾಪಕ್ಕೆ ಹೊರಳಿದರು.

ವಾಸ್ತವವಾಗಿ ಕೃಷ್ಣಸ್ವಾಮಿ ಯಾವ ರೀತಿಯ ಹಣಕಾಸಿನ ಕಷ್ಟಕ್ಕೂ ಸಿಲುಕಿರಲಿಲ್ಲ. ನಾರಾಯಣಮೂರ್ತಿಗಳು ಅವನನ್ನು ತಮ್ಮ

ಮನೆಯಲ್ಲಿ ಇಟ್ಟುಕೊಂಡು ಓದಿಸಿದ್ದರು; ಅವನಿಗೆ ಬಿ. ಎ. ಪ್ಯಾಸಾದ ಮೇಲೆ, ತಮ್ಮ ಅಲ್ಪ ಸ್ವಲ್ಪ ವ್ಯಕ್ತಿಪ್ರಭಾವದಿಂದ ಅವನಿಗೆ ಬೆಂಗಳೂರು ಅಾರಾ ಕಚೇರಿಯಲ್ಲಿ ಗುಮಾಸ್ತೆಯ ಕೆಲಸವನ್ನು ಕೊಡಿಸಿದ್ದರು; ಅವನು ಕೆಲಸಕ್ಕೆ ಸೇರಿದಾಗ ತಿಂಗಳಿಗೆ ನಲವತ್ತು ರೂಪಾಯಿ ಸಂಬಳ. ತಂದೆಯನ್ನು ಕಳೆದುಕೊಂಡು ತಬ್ಬಲಿಯಾಗಿದ್ದ ಕೃಷ್ಣಸ್ವಾಮಿ ಹೇಗೋ ಕಷ್ಟದಿಂದ ವಿದ್ಯಾ ಭ್ಯಾಸ ಮಾಡಿದವನು; ಹೈಸ್ಕೂಲು ತರಗತಿಗಳಲ್ಲಿದ್ದಾಗ ಅನಾಥಾಲಯ ದಲ್ಲಿದ್ದನು. ನಾರಾಯಣಮೂರ್ತಿಗಳು ಸಹ ಕಡು ಬಡತನದಲ್ಲಿಯೆ ಬೆಳೆದವರು; ಭಿಕ್ಷಾನ್ನ ವಾರಾನ್ನಗಳನ್ನು ಮಾಡಿಕೊಂಡು, ಕೆಲವು ಕಾಲ ಅನಾಥಾಲಯದಲ್ಲಿದ್ದುಕೊಂಡು, ಕಷ್ಟದಿಂದ ವಿದ್ಯಾರ್ಜನೆ ಮಾಡಿದವರು; ಮಾವನ ಕಡೆಯಿಂದ ಬಂದ ಆಸ್ತಿಯಿಂದ ಭಾಗ್ಯವಂತರೆನಿಸಿದವರು. ಅವರ ಹೆಂಡತಿ ಜಯಲಕ್ಷ್ಮಿ ಭಾಗ್ಯಲಕ್ಷ್ಮಿಯಾಗಿ ಅವರ ಮನೆಗೆ ಬಂದಳು. ಅವರು ತಮಗೆ ಹೆಂಡತಿಯ ಕಡೆಯಿಂದ ಬಂದ ಆಸ್ತಿಯೆಲವನ್ನೂ ಹೆಂಡತಿಯ ಹೆಸರಿಗೇ ಮಾಡಿ, ಅದರಿಂದ ಬರುವ ಹುಟ್ಟುವಳಿಯನ್ನೆಲ್ಲಾ ದಾನ ಧರ್ಮದ ಕಾರ್ಯಗಳಿಗಾಗಿ ವಿನಿಯೋಗಿಸುತ್ತಿದ್ದರು. ಅವರೂ ಕೂಡ ಕೆಲಸಕ್ಕೆ ಸೇರಿ ದಾಗ ಇಪ್ಪತ್ತೈದು ರೂಪಾಯಿಗೆ ಸೇರಿ, ಈಗ ಶಿರಸ್ತೇದಾರರಾಗಿ ಎಂಬತ್ತು ರೂಪಾಯಿ ಸಂಬಳ ಪಡೆಯುತ್ತಿದ್ದರು. ಅವರು ಹಣಕ್ಕಾಗಿ ಎಂದೂ ದುರಾಶೆಪಟ್ಟವರಲ್ಲ. ಬಂದದ್ದರಲ್ಲಿ ಬಾಳು ನಡಸಬೇಕು ಎಂಬುದು ಅವರ ಜೀವನ ಸೂತ್ರ. ಹೆಂಡತಿಯ ಕಡೆಯ ಆಸ್ತಿಗಾಗಿ ಅವರು ಹಂಬಲಿಸಿದವ ರಲ್ಲ; ಕೈಚಾಚಿದವರಲ್ಲ ಅನಪೇಕ್ಷಿತವಾಗಿ ಬಂದ ಸಂಪತ್ತು. ದೇವರು ಕೊಟ್ಟ ಸಂಪತ್ತನ್ನು ಸದ್ವಿನಿಯೋಗ ಮಾಡಬೇಕೆಂಬುದೇ ಅವರ ಇನ್ನೊಂದು ಸೂತ್ರ. ಅವರು ಮನುಸ್ಸು ಮಾಡಿದ್ದರೆ ಬಹು ವೈಭವದ ಜೀವನವನ್ನು ನಡಸ ಬಹುದಾಗಿತ್ತು; ನವನಾಗರಿಕತೆಯ ಮಾಯಾಮೋಹಿನಿ ಅವರ ಮನೆಯನ್ನು ಹೊಕ್ಕಿರಲಿಲ್ಲ. ಆದರೆ ಹಾಗೆ ಮಾಡದೆ, ಕೇವಲ ಸರಳ ಜೀವನವನ್ನು ನಡಸು ವುದರಲ್ಲಿಯೆ ತೃಪ್ತರಾಗಿದ್ದರು; ಸಂಬಳದ ಆದಾಯದಲ್ಲಿಯೇ ಸಂಸಾರ ನಿರ್ವಹಣೆಮಾಡುತ್ತಿದ್ದರು. ಹೆಚ್ಚಿನ ವೆಚ್ಚಗಳಿಗೆ ಮಾತ್ರ ಹೆಂಡತಿಯ ಆಸ್ತಿಯ ಹುಟ್ಟುವಳಿಯನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಅಲ್ಲದೆ, ದಾನ ಧರ್ಮವೇ ಆಗಲಿ, ವಿಶೇಷವ್ಯಯವೇ ಆಗಲಿ, ಹೆಂಡತಿಯನ್ನು ಕೇಳದೆ ಏನನ್ನೂ

ಮಾಡರು. ಅವರು ದಾನಶೀಲರಾಗಿಲ್ಲದೆಹೋಗಿದ್ದರೆ, ಅವರಿಗೆ ಕೃಪಣ ರೆಂಬ ಬಿರುದು ಸುಲಭವಾಗಿ ಸಲ್ಲುತ್ತಿತ್ತು. ಅವರು ಗುಪ್ತವಾಗಿಯೇ ಅನೇಕ ದಾನಗಳನ್ನು ಮಾಡುತ್ತಿದ್ದುದರಿಂದ, ಅವರ ಗುಪ್ತದಾನವನ್ನು ಅರಿಯದ ಹಲಕೆಲವರು ಅವರನ್ನು ಕೃಪಣರೆಂದೇ ಭಾವಿಸಿದ್ದರು. ನಾರಾಯಣಮೂರ್ತಿಗಳು ಹಲವಾರು ವರ್ಷ ಕೆಲಸ ಮಾಡಿದ ಮೇಲೆ ಈಗ ಎಂಬತ್ತು ರೂಪಾಯಿ ತರುತ್ತಿದ್ದರು; ಕೃಷ್ಣಸ್ವಾಮಿಯಾದರೋ, ಕೇವಲ ನಾಲ್ಕೈದು ವರ್ಷಗಳ ಅವಧಿಯಲ್ಲಿಯೇ ಅರುವತ್ತು ರೂಪಾಯಿ ತರುತ್ತಿದ್ದನೀಗ. ತಮ್ಮ ಸಂಬಳದಿಂದ ತಮ್ಮ ಗೃಹಕೃತ್ಯ ನಡೆಯುತ್ತಿರುವಾಗ ಅಳಿಯನ ಸಂಬಳ ಅವನಿಗೆ ಬೇಕಾದಷ್ಟಾಯಿತೆಂದು ಅವರು ಭಾವಿಸಿದ್ದರಲ್ಲಿ ತಪ್ಪೇನಿಲ್ಲ.

ಕೃಷ್ಣಸ್ವಾಮಿ ಬಡತನದಲ್ಲಿ ಬೆಳೆದವನಾದರೂ ಈಗ ಬಡತನದ ಅಥವಾ ಸಾಮಾನ್ಯಮಟ್ಟದ ಜೀವನವನ್ನು ನಡಸಲು ಸಿದ್ಧನಾಗಿರಲಿಲ್ಲ. ಅವನಿಗೆ ಭೋಗ ಜೀವನವನ್ನು ನಡಸಬೇಕೆಂಬ ಕನಸು. ಅಂತಹ ಜೀವನಕ್ಕೇನೋ ಈಗ ಅವನಿಗೆ ಬರುತ್ತಿದ್ದ ಸಂಬಳ ಏನೇನೂ ಸಾಲುತ್ತಿರಲಿಲ್ಲ.

ಅದು ಹೇಗಾದರೂ ಇರಲಿ. ಅಳಿಯನು ಅನಿರೀಕ್ಷಿತವಾಗಿ ಬಂದದ್ದರ ಉದ್ದೇಶ ನಾರಾಯಣಮೂರ್ತಿಗಳಿಗೆ ಗೊತ್ತಾಗಲಿಲ್ಲ.

## ೨
## ತಾಯಿ ಹೆಚ್ಚೋ ಗಂಡ ಹೆಚ್ಚೋ?

ಅತ್ತ ಅಡಿಗೆಯ ಮನೆಯಲ್ಲಿ ತಾಯಿ ಮಗಳ ಮಾತುಕತೆ.

ಜಯಲಕ್ಷಮ್ಮನವರು ಅಳಿಯ ಮಗಳು ಬಂದದ್ದರಿಂದ ಹೆಚ್ಚಿನ ಅಡಿಗೆ ಮಾಡಲು ಹವಣಿಸುತ್ತಿದ್ದರು. ಬಿಸಿಯ ಸಾರೇನೋ ಒಲೆಯ ಮೇಲೆ ಕುದಿಯುತ್ತಿತ್ತು; ಅದನ್ನೇ ಎಲ್ಲರಿಗೂ ಹೇಗೋ ಸರಿಮಾಡಿಕೊಳ್ಳುವುದೆಂದು ಎಣಿಸಿ, ಒಂದು ಪಾವು ಅಕ್ಕಿ ತೊಳೆದು ಅನ್ನಕ್ಕಾಗಿ ನೀರನ್ನು ಒಲೆಯ ಮೇಲಿಟ್ಟರು.

"ನೀನು ಈಗಾಗಲೆ ಅಡಿಗೆ ಮಾಡಿ ದಣಿದಿದ್ದೀಯೆ. ನಾನು ಮಾಡುತ್ತೇನೆ, ಬಿಡಮ್ಮ."—ಭಾಗ್ಯಲಕ್ಷ್ಮಿ ಹೇಳಿದಳು.

"ನೀನೂ ಪ್ರಯಾಣದಿಂದ ಬಳಲಿದ್ದೀಯಮ್ಮ. ಅಲ್ಲದೆ ಬೇರೆ ಮಡಿ ಸೀರೆಯೂ ಇಲ್ಲ. ಸ್ವಲ್ಪ ಸುದಾರಿಸಿಕೊ. ನಾಳೆ ರಾತ್ರಿ ಬೇಕಾದರೆ ಮಾಡುವೆಯಂತೆ. ನಿಂತೇ ಇದೀಯಲ್ಲ, ಆ ಮಣೆ ಎಳೆದುಕೊಂಡು ಅದರ ಮೇಲೆ ಕುಳಿತುಕೋ."—ಪ್ರೀತಿ ವಾತ್ಸಲ್ಯಗಳಿಂದ ನುಡಿದರು ಜಯಲಕ್ಷಮ್ಮ.

ಭಾಗ್ಯಲಕ್ಷ್ಮಿ ಅಲ್ಲಿಯೇ ಇದ್ದ ಮಣೆಯನ್ನು ಎಳೆದುಕೊಂಡು ಅದರ ಮೇಲೆ ಕುಳಿತಳು.

ಮಗಳು ಕುಳಿತ ಮೇಲೆ ತಾಯಿ ಹೇಳಿದರು:

"ದೊಡ್ಡದಾಗಿ ಕುಳಿತುಕೋ ಅಂತ ಹೇಳಿದೆ. ಅಗ್ಗಿಷ್ಟಿಕೆಗೆ ಕೆಂಡ ಹಾಕಿ ಕೊಡುತ್ತೇನೆ. ಒಂದಿಷ್ಟು ಹುರಳಿ ಹಪ್ಪಳ ಸುಟ್ಟು, ಸಂಡಿಗೆ ಕರಿಯಮ್ಮ. ಅನ್ನ ಆಗುವ ಹೊತ್ತಿಗೆ ಅದೂ ಆಗಿಹೋಗಲಿ."

ಭಾಗ್ಯಲಕ್ಷ್ಮಿ ಹಪ್ಪಳ ಸುಡುತ್ತಿದ್ದಳು. ತಾಯಿ ಮಗಳನ್ನು ಕೇಳುತ್ತಿದ್ದ ಪ್ರಶ್ನೆಗಳೆಂದರೆ,—ಜರತಾರಿ ಸೀರೆಗಳಲ್ಲಿ ಯಾವುದನ್ನಾದರೂ ನೀರಿಗೆ ಹಾಕಿದ್ದೀಯಾ? ಕಳೆದ ವರ್ಷ ತೆಗೆದು ಕೊಟ್ಟ ಕುತ್ತಾಲದ ಸೀರೆಯ ಬಣ್ಣ ಹೋಯಿತೆ? ಹಾಲಿನ ವರ್ತನೆ ಸರಿಯಾಗಿ ಸಿಕ್ಕುತ್ತದೆಯೆ, ಎಷ್ಟು ಹಾಲು ಕೊಳ್ಳುತ್ತೀರಿ? ಅಡಿಗೆ ಮಾಡುವುದು ಇದ್ದಲ ಒಲೆಯಲ್ಲೋ, ಸೌದೆಯ ಒಲೆಯಲ್ಲೋ? ಮುಸುರೆ ತೊಳೆಯುವುದಕ್ಕೆ, ಬಟ್ಟೆ ಒಗೆಯು ವುದಕ್ಕೆ, ಒಕ್ಕಲುಗಿತ್ತಿಯನ್ನು ಇಟ್ಟುಕೊಂಡಿದ್ದೀಯಾ—ಇವೇ ಮುಂತಾಗಿ ಗೃಹಕೃತ್ಯಕ್ಕೆ ಸಂಬಂಧಪಟ್ಟವು. ಈ ಪ್ರಶ್ನೆಗಳಿಗೆ ಭಾಗ್ಯಲಕ್ಷ್ಮಿ ಕೊಟ್ಟ ಉತ್ತರಗಳಿಂದ, ಮಗಳು ಯಾವ ರೀತಿಯಲ್ಲಿಯೂ ಕಷ್ಟಪಡದೆ ನೆಮ್ಮದಿ ಯಿಂದಿರುವಳೆಂದು ತಿಳಿದು ತಾಯಿಗೆ ತುಂಬ ಹಿಗ್ಗಾಯಿತು. ನಾರಾಯಣ ಮೂರ್ತಿಗಳ ಮನಸ್ಸಿನಲ್ಲಿ ಹೊಳೆದಂತೆ, "ಅಳಿಯ ಈಗ ಬಂದ ಕಾರಣ ಏನು?" ಎಂಬ ಪ್ರಶ್ನೆ ಜಯಲಕ್ಷಮ್ಮನವರ ಮನಸ್ಸಿಗೆ ಹೊಳೆಯಲೇ ಇಲ್ಲ; ಹೊಳೆದು ಕಾಡಲೂ ಇಲ್ಲ. ಕಾರಣವಿರಲಿ ಕಾರಣವಿಲ್ಲದಿರಲಿ, ಮನೆಯ ಮಗಳು ಮನೆಗೆ ಎಷ್ಟು ಸಲ ಬಂದರೂ ಯಾವ ತಾಯಿಗೂ ಬೇಸರವಾಗದು. ಜಯಲಕ್ಷಮ್ಮ ಮಗಳ ಬರವಿನ ಹಿಗ್ಗಿನಲ್ಲಿಯೇ ಇನ್ನೂ ಓಲಾಡುತ್ತಿದ್ದರು.

ಈ ನಡುವೆ, ಪುರಾಣಕ್ಕೆ ಹೋಗಿದ್ದ ಗೌರಮ್ಮನವರು ಮನೆಗೆ ಹಿಂದಿರುಗಿದರು. ಭಾಗ್ಯಲಕ್ಷ್ಮಿ ಮನೆಗೆ ಬಂದಿದ್ದಾಳೆಂದು ತೊಟ್ಟಿಗೆ ಕಾಲಿಟ್ಟ ಕೂಡಲೆ ತಿಳಿಯಬಂದಿತು. ಕೈಕಾಲು ತೊಳೆದುಕೊಂಡು, "ಭಾಗ್ಯಾ, ಚೆನ್ನಾಗಿದ್ದೀಯಾ ತಾಯಿ?" ಎಂದು ಕೇಳುತ್ತಲೇ ತವಕದಿಂದ ಅಡಿಗೆಯ ಮನೆಯನ್ನು ಹೊಕ್ಕರು; ತಾಯಿ ಮಗಳ ಮಾತುಕತೆಯಲ್ಲಿ ಬೆರೆತರು ಗೌರಮ್ಮನವರ ಪ್ರಶ್ನೆಗೆ, "ಚೆನ್ನಾಗಿದ್ದೇನೆ" ಎಂದು ಎಲ್ಲರಿಗೂ ಕೊಟ್ಟಂತೆ ಉತ್ತರ ಕೊಟ್ಟಳು ಭಾಗ್ಯಲಕ್ಷ್ಮಿ.

"ಇದೇನೇ ಭಾಗ್ಯ, ಹೀಗೆ ಮಾಡಿದೆ? ಬರುತ್ತೇನೆ ಅಂತ ಒಂದು ಕಾಗದ ಹಾಕಿಸಿದ್ದರೆ ಏನು ಕೊಳ್ಳೆಹೋಗುತ್ತಿತ್ತು? ನಿಂತ ನಿಲುವಿಗೆ ಹೊರಟುಬಂದರೆ ಇಲ್ಲಿ ನಾವು ಏನಂತ ತಿಳಿದುಕೊಳ್ಳಬೇಕು? ಖಾಯಿಲೆಯೋ ಕಸಾಲೆಯೋ, ಏನು ವಿಚಾರವೋ ಅಂತ ಮನಸ್ಸಿಗೆ ಗಾಬರಿ ಆಗುವುದಿಲ್ಲವೆ? ಉಪಚಾರಕ್ಕೇನೋ ಚೆನ್ನಾಗಿದ್ದೇನೆ ಅಂತ ಹೇಳಿಬಿಟ್ಟೆ. ನಿಜವಾಗಿ ಹೇಳು, ಮೈಗೆ ಸ್ವಸ್ಥವಿಲ್ಲವೋ ಹೇಗೆ?"—ಎಂದು ಗೌರಮ್ಮನವರು ಪ್ರಶ್ನೆಗಳ ಸುರಿಮಳೆ ಸುರಿಸಿಬಿಟ್ಟರು.

"ಚೆನ್ನಾಗಿಲ್ಲದೆ ಏನು ಅತ್ತೆ? ನನ್ನ ನೋಡಿದರೆ ಗೊತ್ತಾಗುವುದಿಲ್ಲವೆ?"

"ನನಗೂ ಐವತ್ತರ ಹತ್ತಿರಕ್ಕೆ ಬಂತಮ್ಮಾ. ಚಾಳೀಸ ಇನ್ನೂ ಹರಿದಿಲ್ಲ. ನನ್ನ ಮಬ್ಬುಗಣ್ಣಿಗೆ ಈ ಕತ್ತಲೆಯಲ್ಲಿ ಅದು ಹೇಗೆ ಗೊತ್ತಾಗಬೇಕು? ಆ ವಿಚಾರವನ್ನ ನಿನ್ನ ತಾಯಿ ಹೇಳಬೇಕು."

"ನನ್ನ ಕಣ್ಣಿಗೇನೂ ಬಡವಾದ ಹಾಗೆ ಕಾಣುವುದಿಲ್ಲ. ಹೇಗಿದ್ದಳೋ ಹಾಗೇ ಇದ್ದಾಳೆ" ಎಂದರು ಜಯಲಕ್ಷಮ್ಮ.

"ತಿಂಗಳು ತಿಂಗಳಿಗೆ ಸರಿಯಾಗಿ ಹೊರಗಾಗುತ್ತ ಇದ್ದೀಯೇನೆ? ಹೊರಗಾಗಿ ಎಷ್ಟು ತಿಂಗಳಾಯಿತು?"—ಎಂದು ಗೌರಮ್ಮನವರು ಒಂದು ಬಹು ಮುಖ್ಯವಾದ ಪ್ರಶ್ನೆಯನ್ನೇ ಹಾಕಿದರು.

ಈ ಪ್ರಶ್ನೆಗೆ ಉತ್ತರ ಹೇಳಲು ಭಾಗ್ಯಲಕ್ಷ್ಮಿಗೆ ತುಸ ನಾಚಿಕೆಯಾಯಿತು. ನಾಚಿಕೆಪಡಲು ಕಾರಣವೇನಿರಲಿಲ್ಲ. ಆದರೂ ನಾಚಿಕೆಯಾಯಿತು. ತಲೆ ತಗ್ಗಿಸಿಕೊಂಡು, ತುಸ ಮೆಲುದನಿಯಲ್ಲಿ ಉತ್ತರ ಕೊಟ್ಟಳು:

“ನೀರಾಗಿ ಇನ್ನೂ ಒಂದು ವಾರವಾಯಿತು, ಅಷ್ಟೆ.”

“ನೀನು ಬಸುರಿಯಾಗಿದೀಯೇನೋ, ನಾಣು ಮೊನ್ನೆಗು ಕಂಡಾ ನೇನೋ ಅಂತ ಮಾಡಿಕೊಂಡಿದ್ದೆ. ಹೋಗಲಿ, ಬಿಡು. ದೇವರ ದಯ ಇದ್ದರೆ ಈ ವರ್ಷವೇ ನಿನ್ನ ಬಾಣಂತಿತನ ಮಾಡುತೇನೆ. ನಿನ್ನ ಗಂಡ ಸ್ವಸ್ಥವಾಗಿದಾನೆಯೋ ?”

“ಹ್ಞೂ.”

“ಹಾಗಾದರೆ ಇಂತ ಗಳಿಗೆಯಲ್ಲಿ ಹೊರಟು ಬಂದದ್ದು ಯಾಕೆ? ನವರಾತ್ರಿಗಾದರೂ ಬಂದಿದ್ದರೆ ಚೆನ್ನಾಗಿತ್ತು; ನೋಟ ಗೀಟ ನೋಡಬಹುದಾಗಿತ್ತು. ನಂಜನಗೂಡಿನಲ್ಲಿ ಸೇವೆ ಮಾಡಬೇಕಾದ್ದು ಏನಾದರೂ ಇದೆಯೇ ?”

“ಏನಿಲ್ಲ.”

“ನಿನ್ನ ಗಂಡ ಒಡವೆ ಗಿಡವೆ ಏನಾದರೂ ಮಾಡಿಸಬೇಕು ಅಂತ ಕರೆದುಕೊಂಡು ಬಂದಿದಾನೆಯೇನೆ?” ಎಂದು ಗೌರಮ್ಮನವರು ನಗುತ್ತ ಕೇಳಿದರು.

ಈಗಲೀಗ ಭಾಗ್ಯಲಕ್ಷ್ಮಿಯ ಮನಸ್ಸಿಗೆ ಸ್ವಲ್ಪ ಚುಚ್ಚಿದ ಹಾಗಾಯಿತು. ಮುಖ ಸಪ್ಪೆಯಾಯಿತು; ಕಣ್ಣೂ ಸ್ವಲ್ಪ ಒದ್ದೆಯಾಯಿತು. ತಾನು ಈಗ ತೌರುಮನೆಗೆ ಬಂದಿರುವ ಕಾರಣ ಅವಳಿಗೆ ಗೊತ್ತಿತ್ತು. ತಾವು ಬಂದದ್ದಕ್ಕೆ ಕಾರಣವನ್ನು ಕೃಷ್ಣಸ್ವಾಮಿ ಈಗಾಗಲೇ ತನ್ನ ತಂದೆಗೆ ಹೇಳಿರುವನೋ ಇಲ್ಲವೋ ತನಗೆ ತಿಳಿಯದು. ಗಂಡ ಆಡಬೇಕಾದ ಮಾತನ್ನು ತಾನು ಹೇಗೆ ಆಡುವುದು? ಈಗ ಬಂದಿರುವ ವಿಚಾರ ತನಗಿಂತ ಹೆಚ್ಚಾಗಿ ತನ್ನ ಯಜಮಾನರಿಗೆ ಸಂಬಂಧಪಟ್ಟದ್ದು. ತಮ್ಮ ಬರವಿಗೆ ಅವರು ಕಾರಣ ಹೇಳುತ್ತಾರೆಯೋ ಇಲ್ಲವೆ ಅದನ್ನು ಗುಟ್ಟಾಗಿ ಇಟ್ಟುಕೊಳ್ಳುತ್ತಾರೆಯೋ ತನಗೆ ತಿಳಿಯದು. ಈ ವಿಚಾರವನ್ನು ಅವರು ತನ್ನೊಡನೆ ಚರ್ಚೆ ಮಾಡಿರಲಿಲ್ಲ. ತಾವು ಹಿಂದಿರುಗುವಾಗ ತನ್ನನ್ನು ತವರು ಮನೆಯಲ್ಲಿಯೇ ಬಿಟ್ಟು ಹೋಗುತ್ತಾರೆಯೋ ಇಲ್ಲವೆ ಜೊತೆಯಲ್ಲಿ ಕರೆದುಕೊಂಡು ಹೋಗುವರೋ ಅದು ಕೂಡ ತನಗೆ ತಿಳಿಯದು. ತನ್ನ ಗಂಡನಿಗೆ

ಸಂಬಂಧಪಟ್ಟ ವಿಚಾರ ಅಂತಹುದೇನು ರಹಸ್ಯವಲ್ಲದಿದ್ದರೂ, ಅದು ಇಂದಲ್ಲ ನಾಳೆ ಹೊರಪಟ್ಟೇಪಡುವುದಾದರೂ, ಅದನ್ನು ಅವರು ಹೊರಪಡಿಸುವ ಮುನ್ನ ತಾನು ಹೊರಪಡಿಸುವ ಸ್ವಾತಂತ್ರ್ಯ ವಹಿಸಬಹುದೇ—ಎಂಬ ಪ್ರಶ್ನೆ ಭಾಗ್ಯಲಕ್ಷ್ಮಿಯ ಮುಗ್ಧ ಹೃದಯದಲ್ಲಿ ಮೂಡಿ, ಆ ವಿಚಾರ ತನಗೂ ಸಂಬಂಧಪಟ್ಟದ್ದೇ ಆದ್ದರಿಂದ ಅವಳಿಗೆ ಇಕ್ಕಟ್ಟಿನಲ್ಲಿ ಸಿಕ್ಕಿದಂತಾಗಿ, ಸ್ವಲ್ಪ ವ್ಯಥೆಯಾಯಿತು. ಆ ವ್ಯಥೆ ಅವಳ ಮುಖವನ್ನು ಕಂದಿಸಿತು; ಕಣ್ಣನ್ನು ಒದ್ದೆ ಮಾಡಿತು.

ತಾಯಿಯ ಕಣ್ಣಿಗೆ ಇದು ಗೋಚರವಾಗದೆ ಹೋಗಲಿಲ್ಲ. ಜಯಲಕ್ಷಮ್ಮನವರು ಮೃದುವಾಗಿ ಕೇಳಿದರು:

"ಅತ್ತಿಗಮ್ಮ ಕೇಳಬಾರದ ಪ್ರಶ್ನೆಯನ್ನು ಕೇಳಿದರೆ? ಯಾಕೆ, ಏನೋ ಮನಸ್ಸಿಗೆ ಹಚ್ಚಿಕೊಂಡು ಇರುವ ಹಾಗೆ ಕಾಣುತ್ತದೆಯಲ್ಲ, ಭಾಗ್ಯ? ಅದು ಏನು ಸಂಗತಿ, ನನ್ನ ಕೂಡ ಹೇಳಬಾರದೆ?"

ತಾಯಿಯೊಡನೆಯೂ ಹೇಳಕೂಡದೆ? ಹೆತ್ತ ತಾಯಿ ಹೆಚ್ಚೋ ಕೈಹಿಡಿದ ಗಂಡ ಹೆಚ್ಚೋ? ಎಷ್ಟಾದರೂ ಗಂಡನ ನೆರಳಾಗಿರಬೇಕು ತಾನು. ತನ್ನ ತಾಯಿಯೇ ತನಗೆ ಮಾಡಿದ ಉಪದೇಶವಿದು. ಅದನ್ನು ಪಾಲಿಸುವುದೇ ತನ್ನ ಕರ್ತವ್ಯವಲ್ಲವೆ?

"ನನಗೆ ಸಂಬಂಧಪಟ್ಟದ್ದಲ್ಲ ಅಮ್ಮ. ಅವರಿಗೆ ಸಂಬಂಧಪಟ್ಟದ್ದು"—ಎಂದಿಷ್ಟೇ ನುಡಿದಳು ಭಾಗ್ಯಲಕ್ಷ್ಮಿ.

"ಹಾಗಿದ್ದರೆ ಸರಿ, ಬಿಡು. ಅವನುಂಟು ಅವನ ಮಾವನವರುಂಟು" ಎಂದು ಈ ಮಾತನ್ನು ಅಲ್ಲಿಗೇ ಮುಗಿತಾಯಕ್ಕೆ ತಂದರು ಗೌರಮ್ಮನವರು. ಅಂತೂ, ಕೃಷ್ಣಸ್ವಾಮಿ ತನಗೆ ಸಂಬಂಧಪಟ್ಟ ವಿಚಾರವೇನನ್ನೋ ಮಾವನವರೊಂದಿಗೆ ಪ್ರಸ್ತಾಪಮಾಡುವುದಕ್ಕೆ ಬಂದಿದ್ದಾನೆಂದು ಸೂಕ್ಷ್ಮಬುದ್ಧಿಯ ಗೌರಮ್ಮನವರಿಗೆ ಹೊಳೆಯಿತು. ಮಗಳ ಮತ್ತು ಗೌರಮ್ಮನವರ ಮಾತುಗಳಿಂದ ಜಯಲಕ್ಷಮ್ಮನವರೂ ಅಷ್ಟರಮಟ್ಟಿನ ಅರ್ಥವನ್ನು ಗ್ರಹಿಸಿ ಸುಮ್ಮನಾದರು. ಈಗ ಮಾತ್ರ, "ಅಳಿಯ ಬಂದ ಕಾರಣವೇನು? ಏನು ವಿಚಾರವೋ ಏನೋ" ಎಂದು ಆತಂಕಗೊಂಡರು.

ಭಾಗ್ಯಲಕ್ಷ್ಮಿ ಹಪ್ಪಳ ಸುಟ್ಟು, ಸಂಡಿಗೆಯನ್ನೆಲ್ಲ ಕರಿದಾಗಿತ್ತು. "ನಿಮಗೆ ಫಲಾರಕ್ಕೆ ಏನು ಮಾಡಲಿ ಅತ್ತಿಗಮ್ಮ?" ಎಂದು ಜಯಲಕ್ಷಮ್ಮ ಗೌರಮ್ಮನವರನ್ನು ಕೇಳಿದರು. "ಭಾಗ್ಯಲಕ್ಷ್ಮಿ ಹೇಗೂ ಹಪ್ಪಳ ಸುಟ್ಟಿದ್ದಾಳಲ್ಲ. ಸುಟ್ಟದ್ದಕ್ಕೆ ಮಡಿಯೇನು ಮೈಲಿಗೆಯೇನು? ಎರಡು ಹಪ್ಪಳ ಬಾಯಿಗೆ ಹಾಕಿಕೊಂಡು ಒಂದು ಲೋಟ ಮಜ್ಜಿಗೆ ಕುಡಿದರಾಯಿತು" ಎಂದರು ಗೌರಮ್ಮನವರು. ಮಣೆ ಎಲೆಗಳನ್ನು ಹಾಕಿ, ಊಟಕ್ಕೆ ಸಿದ್ಧಪಡಿಸಲು ಭಾಗ್ಯಲಕ್ಷ್ಮಿ ಎದ್ದು ಹೋದಳು.

ಮಾವನವರೊಡನೆ ತಾನಾಡುತ್ತಿದ್ದ ಮಾತು, ಭಾವಮೈದುನರ ಓಡಾಟ–ಇವುಗಳ ನಡುವೆ, ಅಡಿಗೆಯ ಮನೆಯಲ್ಲಿ ನಡೆದ ಮಾತುಕತೆ ಕೃಷ್ಣಸ್ವಾಮಿಗೆ ಸ್ವಲ್ಪವೂ ಕೇಳಿಬರುವಂತಿರಲಿಲ್ಲ.

## ೩
## ಗಂಡ ಬರೆದದ್ದಕ್ಕೆ ತನ್ನ ರುಜು

ರಾತ್ರಿ ಊಟವಾದ ಮೇಲೆ ಕೃಷ್ಣಸ್ವಾಮಿಯೂ ಭಾಗ್ಯಲಕ್ಷ್ಮಿಯೂ ಮಲಗುವ ಕೋಣೆಯಲ್ಲಿ ತಾಂಬೂಲ ಹಾಕಿಕೊಳ್ಳುತ್ತ ಕುಳಿತಿದ್ದರು. ಭಾಗ್ಯಲಕ್ಷ್ಮಿ ಬಾಯಿಗೆ ಅಡಕೆಯನ್ನು ಮಾತ್ರ ಹಾಕಿಕೊಂಡಿದ್ದಳು, ಅಷ್ಟೆ; ಬೆಳ್ಳಿಯ ತಟ್ಟೆಯಲ್ಲಿದ್ದ ಬಿಳಿಯ ಚಿಗುರೆಲೆಯನ್ನು ಒಂದೊಂದಾಗಿ ಆಯ್ದು ತೆಗೆದು, ಸುಣ್ಣಹಚ್ಚಿ, ಮಡಿಸಿ ಗಂಡನ ಕೈಗೆ ಕೊಡುತ್ತಿದ್ದಳು. ತಾಂಬೂಲ ಅಗಿಯುತ್ತ ಕೃಷ್ಣಸ್ವಾಮಿ ಕೇಳಿದ:

"ನಿನ್ನ ತಾಯಿ ನಿನ್ನನ್ನ ಏನಾದರೂ ಕೇಳಿದರೋ?"

"ನನ್ನ ತಂದೆ ನಿಮ್ಮನ್ನ ಏನಾದರೂ ಕೇಳಿದರೋ?"

"ಇಲ್ಲ. ಏನೂ ಕೇಳಲಿಲ್ಲ."

"ನನ್ನ ತಾಯಿ ಕೇಳಲಿಲ್ಲ. ಆದರೆ—"

"ಏನು, ಆದರೆ?"

"ಏನೋ ಮಾತಿಗೆ ಮಾತು ಬಂದು ಗೌರತ್ತೆ ಕೇಳಿದರು—'ಏನು ಈಗ ಇದ್ದಕ್ಕಿದ್ದ ಹಾಗೆ ಬಂದದ್ದು' ಅಂತ."

"ನೀನು ಏನು ಹೇಳಿದೆ?"

"ಏನೋ ಅವರಿಗೆ ಸಂಬಂಧಪಟ್ಟ ವಿಚಾರ, ನನಗೆ ತಿಳಿಯದು ಎಂದೆ."

"ಇದರಲ್ಲಿ ಗುಟ್ಟೇನು? ಹೇಳಿಬಿಡಬೇಕಾಗಿತ್ತು."

"ಊರಿಗೆ ಹೊರಡುವುದಕ್ಕೆ ಮುಂಚೆ ಈ ವಿಷಯ ನೀವು ಪ್ರಸ್ತಾಪಿಸಲಿಲ್ಲ. ಸುಮ್ಮನೆ, 'ಮೈಸೂರಿಗೆ ಹೊರಡೋಣ. ಸಿದ್ಧನಾಗಿಕೋ' ಎಂದಿರಿ. ನಾನು ನಿಮ್ಮ ಜೊತೆ ಸುಮ್ಮನೆ ಹೊರಟುಬಂದೆ."

"ಯಾಕೆ ಎಂದು ನೀನು ಕೇಳಬಹುದಾಗಿತ್ತಲ್ಲ?"

"ಕೇಳಬಹುದಾಗಿತ್ತು. ಕೇಳಲಿಲ್ಲ."

"ಹಾಗಾದರೆ ಏನು ವಿಷಯ ಎಂದು ನಿನಗೆ ಹೇಗೆ ಗೊತ್ತಾಯಿತು?"

"ಊರಿಗೆ ಹೊರಡುವ ಹಿಂದಿನ ದಿನ ನೀವು 'ನಾಳೆಯಿಂದ ಕೆಲಸಕ್ಕೆ ಹೋಗುವ ಹಾಗಿಲ್ಲ.' ಎಂದಿರಿ. 'ಯಾಕೆ' ಅಂತ ನಾನು ಕೇಳಿದ್ದಕ್ಕೆ 'ಕೆಲಸಕ್ಕೆ ರಾಜಿನಾಮೆ ಕೊಟ್ಟುಬಿಟ್ಟೆ' ಎಂದಿರಿ. ರಾಜಿನಾಮೆ ಕೊಡುವುದಕ್ಕೆ ಮುಂಚೆಯೋ ನನ್ನ ಅಭಿಪ್ರಾಯ ಕೇಳಿದ್ದರೆ ನನಗೆ ತೋರಿದ್ದನ್ನು ಹೇಳುತ್ತಿದ್ದೆ. ನೀವು ಮಾಡಿದ್ದು ಸರಿಯೋ ತಪ್ಪೋ, ಅದರ ಫಲವನ್ನ ನಿಮ್ಮೊಂದಿಗೆ ನಾನೂ ಅನುಭವಿಸುತ್ತೇನೆ. ಇನ್ನು ಊರಿಗೆ ಹೊರಡುವಾಗ 'ಯಾಕೆ' ಎಂದು ಕೇಳಿ ಪ್ರಯೋಜನವೇನು? ಬಹುಶಃ ಈ ವಿಚಾರವಾಗಿಯೇ ಮುಂದೇನು ಮಾಡಬೇಕು ಎಂದು ನಮ್ಮ ತಂದೆಯೊಡನೆ ಪ್ರಸ್ತಾಪ ಮಾಡುತ್ತೀರಿ, ಇಲ್ಲ ನನ್ನನ್ನು ಇಲ್ಲಿ ಬಿಟ್ಟು ಬೇರೆ ಯಾವುದಾದರೂ ಕೆಲಸಕ್ಕೆ ಸೇರಿಕೊಳ್ಳುತ್ತೀರಿ ಎಂದು ಊಹಿಸಿದೆ. ಇಷ್ಟು ಮಾತ್ರ ನನಗೆ ಗೊತ್ತು. ಹೆಚ್ಚು ತಿಳಿಯದ ವಿಚಾರ ನಾನೇಕೆ ಹೇಳಹೋಗಲಿ? ನೀವು ಊರಿಗಲ್ಲದೆ ಕಾಡಿಗೆ ಬಾ ಎಂದಿದ್ದರೂ ಯಾಕೆ ಅಂತ ನಾನು ಕೇಳುತ್ತಿರಲಿಲ್ಲ."

"ಓಹೋ ಹೋ ಹೊ! ಕಲಿಯುಗದ ಸೀತಾದೇವಿ ಕಣೇ ನೀನು!" ಎಂದು ಕೃಷ್ಣಸ್ವಾಮಿ ನಿಜವಾದ ಪ್ರೇಮದಿಂದ, ಮೆಚ್ಚುಗೆಯಿಂದ, ನುಡಿದ.

ವಾಸ್ತವವಾಗಿಯೂ ಭಾಗ್ಯಲಕ್ಷ್ಮಿ ಅಂತಹ ಆದರ್ಶದ ಮಡದಿಯಾಗಿದ್ದಳು. ಗಂಡ ಇಟ್ಟ ಗೆರೆ ದಾಟುತ್ತಾ ಇರಲಿಲ್ಲ; ಕೊಟ್ಟ

ವಸ್ತುವನ್ನು ಬೇಡ ಎನ್ನುತ್ತಿರಲಿಲ್ಲ. ಹೇಳಿದ ಮಾತನ್ನು ಮೀರುತ್ತಿರಲಿಲ್ಲ; ಹೇಳದೆ ಇದ್ದುದನ್ನು ಪ್ರಶ್ನಿಸಿ ಕೇಳುತ್ತಿರಲಿಲ್ಲ. ಸಂಸಾರ ಹೂಡಿದ ಹೊಸವರಲ್ಲಿ ಕೃಷ್ಣಸ್ವಾಮಿ ಒಂದು ದಿನ ಹಾಗಲಕಾಯಿ ತಂದು ಹುಳಿ ಮಾಡು ಎಂದ. ಭಾಗ್ಯಲಕ್ಷ್ಮಿಗೆ ಹಾಗಲಕಾಯಿ ಎಂದರೆ ಆಗದು. ಅಲ್ಲದೆ, ಹಾಗಲಕಾಯಲ್ಲಿ ಗೊಜ್ಜು ಮಾಡುವುದನ್ನು ಮಾತ್ರ ಅವಳು ಕಂಡಿದ್ದಳು. 'ಹಾಗಲಕಾಯಲ್ಲಿ ಹುಳಿಯೆ?' ಎಂದು ಮೆಲ್ಲನೆ ನಕ್ಕು ಪ್ರಶ್ನಿಸಿದಳು, ಅಷ್ಟೆ. 'ನಮ್ಮ ಸ್ನೇಹಿತರೊಬ್ಬರ ಮನೆಯಲ್ಲಿ ಹಾಗಲಕಾಯಿ ಹುಳಿ ಮಾಡಿದ್ದರು, ಚೆನ್ನಾಗಿರುತ್ತೆ' ಎಂದು ಅವನು ಬಾಯಿ ಚಪ್ಪರಿಸಿದ. 'ಆಗಲಿ' ಎಂದು ಅದನ್ನೆ ಮಾಡಿದಳು; 'ಅವರು ತಿಂದದ್ದೆ ನನಗೂ ಆಗಲಿ. ಹಾಗಲಕಾಯಿ ತಿಂದರೆ ಸತ್ತುಹೋಗುತ್ತೇನೆಯೇ?' ಎಂದು ತಾನೂ ಅದನ್ನೇ ಊಟ ಮಾಡಿದಳು. ಒಂದು ದಿವ ಕೃಷ್ಣಸ್ವಾಮಿ ಅವಳನ್ನು ನಾಟಕಕ್ಕೆ ಕರೆದ: "ಗುಬ್ಬಿ ಕಂಪೆನಿ ಬಂದಿದೆ. ನಾನು ಒಂದು ನಾಟಕವನ್ನೂ ನೋಡಿಲ್ಲ, ಹೇಗಿರುತ್ತದೆಯೋ ನೋಡೋಣ ಬಾ." "ನೀವೂ ನೋಡಿಲ್ಲ, ನಾನು ನೋಡಿಲ್ಲ. ಅದನ್ನು ನೋಡಲೇ ಬೇಕೆ?" ಎಂದು ಅವಳು ಕೇಳಿದಳು. "ಅದಕ್ಕೇ ಇಬ್ಬರೂ ನೋಡೋಣ ಬಾ" ಎಂದು ಅವನು ಬಲವಂತ ಮಾಡಿದ. ಅವಳು ಒಪ್ಪಿಕೊಂಡಳು. "ನಾಟಕ ಹೇಗಿತ್ತು?" ಎಂದು ಕೇಳಿದ ಕೃಷ್ಣಸ್ವಾಮಿ. "ನಾನು ನೋಡಲೇ ಇಲ್ಲ, ನನಗೆ ನಿದ್ದೆ ಬಂದು ಬಿಟ್ಟಿತು" ಎಂದು ನಕ್ಕಳು ಭಾಗ್ಯಲಕ್ಷ್ಮಿ. ಅಂದಿನಿಂದ, ನಾಟಕಕ್ಕೆ ಹೋಗಬೇಕಾದರೆ ಕೃಷ್ಣಸ್ವಾಮಿ ಒಬ್ಬನೇ ಹೋಗಲು ಮೊದಲು ಮಾಡಿದ. ಭಾಗ್ಯಲಕ್ಷ್ಮಿ ಮನೆಯಲ್ಲಿ ಒಬ್ಬಳೇ ಹೇಗೆ ಮಲಗಿಕೊಂಡಾಳು ಎಂಬುದನ್ನು ಕುರಿತು ಅವನು ಯೋಚಿಸಿರಲಿಲ್ಲ; ಅವಳ ಜೊತೆಯಲ್ಲಿ ಮಲಗಲು ಮನೆಯ ಒಕ್ಕಲಗಿತ್ತಿಗೆ ಬರಹೇಳಲು ಅವಕಾಶವಿಲ್ಲದಂತೆ ರಾತ್ರಿ ಒಂಬತ್ತು ಗಂಟೆಯ ಹೊತ್ತಿನಲ್ಲಿ "ಇವೊತ್ತು ನಾಟಕಕ್ಕೆ ಹೋಗಬೇಕು, ಬೇಗ ಬಡಿಸು" ಎಂದು ಹೇಳಿಬಿಡುತ್ತಿದ್ದ. ಭಾಗ್ಯಲಕ್ಷ್ಮಿ ಗಂಡ ಬರುವವರೆಗೂ ಜಾಗರಣೆ ಮಾಡುತ್ತ ತನ್ನ ಭೀತಿಯನ್ನೆಲ್ಲ ತನ್ನ ಮುಸುಕಿನಲ್ಲೆ ಅಡಗಿಸಿಕೊಂಡಿರುತ್ತಿದ್ದಳು. ಅವಳಿಗೆ ಬಾಲ್ಯದಲ್ಲಿ ಗೌರತ್ತೆಯೊಂದಿಗೆ ಹರಿಕಥೆ ಪುರಾಣಗಳಿಗೆ ಹೋಗಿಹೋಗಿ ಅವುಗಳಲ್ಲಿ ತುಂಬ ಆಸಕ್ತಿ. ಅವಳ ಚಿತ್ತ

ಪಟದಲ್ಲಿ ಸೀತೆ, ಸಾವಿತ್ರಿ, ದಮಯಂತಿ, ದ್ರೌಪದಿ-ಇವರ ಆದರ್ಶ ಚಿತ್ರಗಳೇ ಅಚ್ಚೊತ್ತಿದ್ದುವು. ಅವಳು ಓದಿದ್ದ ಅಲ್ಪ ಸ್ವಲ್ಪ ಇಂಗ್ಲಿಷು ವಿದ್ಯೆ ಆ ಚಿತ್ರಗಳ ಪ್ರಭೆಯನ್ನು ಮಸುಳಿಸುವಷ್ಟು ಸಮರ್ಥವಾಗಿರಲಿಲ್ಲ. ಅಲ್ಲದೆ, ಮದುವೆಯಾದ ಮೇಲೂ ಗಂಡನೊಡನೆ ಸಂಸಾರ ಹೂಡುವ ಮುನ್ನವೂ ತನ್ನ ತಾಯಿ ತನಗೆ ಅರೆದು ಹುಯ್ದಿದ್ದ ಪತಿವ್ರತಾ ಧರ್ಮದ ಕೆಲವು ಉಪದೇಶ ವಾಕ್ಯಗಳು ಅವಳ ಹೊಸದಾಗಿ ತೆರೆದ ದಾಂಪತ್ಯಜೀವನದ ದೀಪದಂಡವಾಗಿದ್ದುವು. ಇಂತಹ ಹೆಣ್ಣು ಇನ್ನು ಹೇಗೆ ತಾನೆ ನಡೆದು ಕೊಂಡಾಳು ? ಗಂಡ ಬರೆದದ್ದಕ್ಕೆ ತನ್ನ ರುಜು ಹಾಕುತ್ತಿದ್ದಳು.

ಕೃಷ್ಣಸ್ವಾಮಿ ಭಾಗ್ಯಲಕ್ಷ್ಮಿಯನ್ನು ತಾನು ಒಪ್ಪಿಯೇ ಮದುವೆಯಾಗಿದ್ದ ; ಮದುವೆಗೆ ಮುನ್ನ ಅವಳ ರೂಪ ಇವನಿಗೆ ಒಪ್ಪಿಗೆಯಾಗಿತ್ತು ; ಮದುವೆಯಾದಮೇಲೆ ಅವಳ ನಡತೆಯೂ ಸರಿಗಂಡಿತ್ತು. ಆದರೆ, ಅವಳು ತನ್ನ ತಂದೆ ತಾಯಿಗಳಲ್ಲಿಯೂ ತನ್ನಲ್ಲಿಯೂ ಇಟ್ಟಿದ್ದ ಭಕ್ತಿ ಸ್ವಲ್ಪ ಅತಿಯೇನೋ ಎಂದು ಅವನಿಗೆ ತೋರುತ್ತಿತ್ತು. ಭಾಗ್ಯಲಕ್ಷ್ಮಿ ತನ್ನಲ್ಲಿ ಇನ್ನೂ ಹೆಚ್ಚು ಸಲಿಗೆಯಿಂದ, ಸರಸವಾಗಿ, ವರ್ತಿಸಬೇಕೆಂದು ಅವನ ನಿರೀಕ್ಷೆ. ತನ್ನ ಹೆಂಡತಿಯಲ್ಲಿ ಏನೋ ಇಲ್ಲದ ಬಿಗುಮಾನ ಸಲ್ಲದ ಲಜ್ಜೆ ಮನೆಮಾಡಿ ಕೊಂಡಿವೆಯೆಂದು ಅವನ ಎಣಿಕೆ. ಭಾಗ್ಯಲಕ್ಷ್ಮಿ ಯಾವ ಭಾಗದಲ್ಲಿಯೂ ಅವನಿಗೆ ಅತೃಪ್ತಿ ಅಸಮಾಧಾನಗಳನ್ನು ಉಂಟುಮಾಡದಿದ್ದರೂ ಅವಳು ತನ್ನ ಆದರ್ಶದ ಭೋಗಲಕ್ಷ್ಮಿಯಾಗಿಲ್ಲವೆಂದು ಒಮ್ಮೊಮ್ಮೆ ನಿಟ್ಟುಸಿರು ಬಿಡುತ್ತಿದ್ದ. ಅದು ಎಂತಹ ಭೋಗವೋ ಅದರ ವಿವರ ವೈಖರಿಯನ್ನು ಅವನಾದರೂ ಕಾಣನು. ಅವಳು ಸೀತಾದೇವಿಯಂತಿರುವುದು ಬಿಟ್ಟು ರಂಭೆಮೇನಕೆಯರಂತಿರಬೇಕೆಂದು ಅಸ್ಪಷ್ಟವಾದ ಕಲ್ಪನೆಯೊಂದು ಅವನ ಮನಸ್ಸಿನಲ್ಲಿ ಮೂಡಿದ್ದಿತೆಂದು ಕಾಣುತ್ತದೆ.

ಪ್ರಕೃತದಲ್ಲಿ, "ನೀನು ಕಲಿಯುಗದ ಸೀತಾದೇವಿ" ಎಂದು ಭಾಗ್ಯಲಕ್ಷ್ಮಿಯನ್ನು ಕುರಿತು ಕೃಷ್ಣಸ್ವಾಮಿ ಹೇಳಿದಾಗ ಅವನ ಮನಸ್ಸಿನಲ್ಲಿ ಈ ಬಗೆಯ ಭಾವನೆ ಯಾವುದೂ ಮರುಕೊಳಿಸಿಕೊಂಡಿರಲಿಲ್ಲ. ಮೆಚ್ಚಿದ ಮನದಿಂದಲೇ ಮೂಡಿ ಬಂದ ಮಾತದು.

ಆ ಮಾತಿಗೆ ಭಾಗ್ಯಲಕ್ಷ್ಮಿ ಮೌನವಾಗಿದ್ದಳು.

ಕೃಷ್ಣಸ್ವಾಮಿಯೇ ಕೇಳಿದ: "ನಿಮ್ಮ ತಂದೆಗೆ ತಿಳಿಸಲೋ ಬೇಡವೊ?"

'ತಿಳಿಸದಿದ್ದರೂ ಇವೊತ್ತಲ್ಲ ನಾಳೆ ತಿಳಿಯುತ್ತದೆ' ಎಂದು ಹೇಳಬೇಕೆಂದು ತೋರಿ, ಹಾಗೆ ಹೇಳಲಿಲ್ಲ. "ಅವರಿಗೆ ತಿಳಿಸಬೇಕು ಅಂತ ತಾನೆ ನೀವು ಬಂದಿರುವುದು?" ಎಂದು ಕೇಳಿದಳು.

ತಿಳಿಸಬೇಕೋ ಬೇಡವೋ ಎಂಬ ಬಗ್ಗೆ ಅವನೇ ಇನ್ನೂ ಯಾವ ನಿರ್ಧಾರಕ್ಕೂ ಬಂದಿರಲಿಲ್ಲ. ಭಾಗ್ಯಲಕ್ಷ್ಮಿಯ ಪ್ರಶ್ನೆ ಅವನನ್ನು ನಿರ್ಧಾರದ ನೆಲೆಗೆ ಮುಟ್ಟಿಸಿತು.

"ಹೌದು."

"ಹಾಗಾದರೆ ತಿಳಿಸಿ."

"ಅದರಿಂದ ಪ್ರಯೋಜನವಾಗುವುದೋ?"

"ಆದರೂ ಆಗಬಹುದು. ಈಗ ನೀವು ಬಿಟ್ಟ ಕೆಲಸ ಕೊಡಿಸಿದವರು ಅವರೇ. ಈಗಲೂ ನಿಮಗೆ ಇಷ್ಟವಾದ ಬೇರೆ ಯಾವುದಾದರೂ ಕೆಲಸ ಕೊಡಿಸಬಹುದು."

"ನಾನು ಅವರಿಂದ ಬಯಸುವ ಪ್ರಯೋಜನ ಅದಲ್ಲ."

"ಇನ್ನು ಏನು?"

"ಅವರಿಂದ ನನಗೆ ಹಣದ ಸಹಾಯವಾಗಬೇಕು."

"ಅದಕ್ಕೆ ನಾನೇನು ಮಾಡಲಿ?"

"ನಿಮ್ಮ ತಾಯಿಗೆ ಹೇಳಿ, ಅವರಿಂದ ನಿಮ್ಮ ತಂದೆಗೆ ಒಂದು ಮಾತು ಹೇಳಿಸಬೇಕು."

"ನಮ್ಮ ತಂದೆಯನ್ನೇ ನೀವು ಕೇಳುವುದು ಮೇಲಲ್ಲವೆ?"

"ನಿಮ್ಮ ತಾಯಿಯನ್ನು ಕೇಳದೆ ಬಹುಶಃ ಅವರು ಏನೂ ಮಾಡಲಾರರು. ಆದ್ದರಿಂದ ನೀನು ನಿನ್ನ ತಾಯಿಗೆ ಒಂದು ಮಾತು ಹೇಳಬೇಕು."

"ಸಂದರ್ಭ ಬಂದಾಗ ನಾನು ವಿಷಯ ತಿಳಿಸುತ್ತೇನೆ. ಏನಾದರೂ ಕೊಡುವುದು ಬಿಡುವುದು ಅವರಿಗೆ ಸೇರಿದ್ದು."

"ಅದು ಸರಿ ಅನ್ನು."

ಕೃಷ್ಣಸ್ವಾಮಿ ಮೌನವಾಗಿ ಯೋಚನೆ ಮಾಡುತ್ತ ಮಲಗಿಕೊಂಡ. ಭಾಗ್ಯಲಕ್ಷ್ಮಿ "ದೀಪ ಆರಿಸಿಬಿಡಲೆ" ಎಂದು ಕೇಳಿದ್ದಕ್ಕೆ "ಹ್ಞೂ" ಎಂದ. ಅವಳು ದೀಪ ಆರಿಸಿ ಮಲಗಿಕೊಂಡಳು. ಅವಳಿಗೆ ಕೂಡಲೆ ನಿದ್ದೆ ಹತ್ತಲಿಲ್ಲ. ತವರು ಮನೆಗೆ ಇಂಥ ಪ್ರಸಂಗದಲ್ಲಿ ಬರುವ ಹಾಗಾಯಿತಲ್ಲಾ ಎಂದು ಅವಳ ಕೊರಗು. ತನ್ನ ಯಜಮಾನರು ತನ್ನನ್ನು ಒಂದು ಮಾತು ಕೇಳದೆ ದುಡುಕಿ ಕೆಲಸ ಬಿಟ್ಟಿದ್ದಾರೆ, ಮುಂದೆ ದುಡುಕಿ ಇನ್ನೇನು ಮಾಡಿಯಾರೋ ಎಂಬ ಚಿಂತೆ; ಅವರಿಗೆ ತಾನು ಹೇಗೆ ನೆರವಾಗಬಹುದು ಎಂಬ ಆಲೋಚನೆ. ತಾನು ಹುಟ್ಟಿ ಬೆಳೆದ ಕುಟುಂಬಕ್ಕೆ ಹೆಚ್ಚಿನ ತೊಂದರೆಯಾಗದೆ, ತಾನು ಹೇಗೆ ನಡೆದುಕೊಂಡರೆ ಗಂಡನಿಗೆ ಒಳ್ಳೆತಾಗುವುದೋ ಹಾಗೆ ನಡೆದುಕೊಳ್ಳುವುದು ಎಂದು ನಿಶ್ಚಯ ಮಾಡಿಕೊಂಡಳು. ಈ ನಿಶ್ಚಯದೊಂದಿಗೆ ಅವಳಿಗೆ ಕ್ರಮೇಣ ನಿದ್ದೆ ಹತ್ತತೊಡಗಿತು.

ಕೃಷ್ಣಸ್ವಾಮಿಗಂತೂ ಬೇಗನೆ ನಿದ್ದೆ ಹತ್ತಲೇ ಇಲ್ಲ. "ನೀವು ಮಾಡಿದ್ದು ಸರಿಯೋ ತಪ್ಪೋ" ಎಂದು ಭಾಗ್ಯಲಕ್ಷ್ಮಿ ಅನುದ್ದಿಷ್ಟವಾಗಿ ಆಡಿದ್ದ ಮಾತು ಅವನ ಮನಸ್ಸಿನಲ್ಲಿ ಆಲೋಚನಾತರಂಗ ಮಾಲೆಯನ್ನೇ ಎಬ್ಬಿಸಿತ್ತು. "ನಾನು ಮಾಡಿದ್ದು ಸರಿಯೇ ತಪ್ಪೇ?" ಎಂದು ತನಗೆ ತಾನು ಪ್ರಶ್ನೆ ಹಾಕಿಕೊಂಡ. ಆತ್ಮಸಮರ್ಥನೆ ಮನುಷ್ಯನ ಹುಟ್ಟುಗುಣ. ಯಾವನೇ ಆಗಲಿ ತಾನು ಮಾಡಿದ್ದು ತಪ್ಪು ಎಂದು ತೋರಿದರೂ ಬಹಿರಂಗವಾಗಿ ಅದನ್ನು ಒಪ್ಪಿಕೊಂಡರೆ ತನ್ನ ಪ್ರತಿಷ್ಠೆಗೆ ಕುಂದಕವೆಂದು ಭಾವಿಸುತ್ತಾನೆ; ತಪ್ಪನ್ನು ಒಪ್ಪಿಕೊಂಡು ಅದರಿಂದಾಗುವ ಆತ್ಮೋನ್ನತಿ ಆತ್ಮಾನಂದ ಇವುಗಳಿಗಿಂತ ತಾನು ಮಾಡಿದ ತಪ್ಪನ್ನೇ ಸರಿಯೆಂದು ಸಾಧಿಸಿ ಅದರಿಂದ ದೊರೆಯಬಹುದಾದ ಆತ್ಮಪ್ರತಿಷ್ಠೆ, ಸಂದೇಹಾಸ್ಪದವಾದ ಪ್ರಯೋಜನ ಅವುಗಳನ್ನೇ ಹೆಚ್ಚೆಂದು ಭಾವಿಸುತ್ತಾನೆ ಮಾಡಿದ ತಪ್ಪಿನ ಜೊತೆಗೆ ಅದು ಸರಿ ಎಂದು ಸಾಧಿಸುವ ಇನ್ನೊಂದು ತಪ್ಪು ಕೂಡಿಕೊಳ್ಳುತ್ತದೆ. ಒಂದು ತಪ್ಪನ್ನು ಇನ್ನೊಂದು ತಪ್ಪಿನಿಂದ ಅಳಿಸಲಾಗುವುದಿಲ್ಲ. ತಪ್ಪು ತೊಡೆದು ಹೋಗಬೇಕಾದರೆ ಅದರ ಒಪ್ಪಿಕೆಯಿಂದ ಮಾತ್ರ ಸಾಧ್ಯ. ಈಗ ಕೃಷ್ಣಸ್ವಾಮಿ ಒಂದು ತಪ್ಪನ್ನು ಮಾಡಿದ್ದ; ಅದು ಸರಿ ಎಂದು

ಸಾಧಿಸುವುದಕ್ಕಾಗಿ ತನ್ನ ಕೆಲಸಕ್ಕೆ ರಾಜಿನಾಮೆ ಕೊಟ್ಟಿದ್ದ ; ತನ್ನ ಮುಂದಿನ ಹಂಚಿಕೆಯನ್ನು ಹಣ್ಣಾಗಿಸುವುದಕ್ಕಾಗಿ ತನ್ನ ಮಾವನವರ ಮುಂದೆ ತಾನು ಮಾಡಿದ್ದು ಸರಿ ಎನ್ನುವ ರೀತಿಯಲ್ಲಿ ಸಾಧಿಸಿ ಇನ್ನೊಂದು ತಪ್ಪು ಮಾಡುವುದರಲ್ಲಿದ್ದ. ತಪ್ಪಿನ ಕೊಂಡಿಗೆ ಕೊಂಡಿ ಕೂಡಿಸುತ್ತ ಹೋದರೆ ಅದು ಸರಪಣಿಯಾಗಿ ಬೆಳೆದು ತನ್ನನ್ನೆ ಕಟ್ಟಿಹಾಕಬಹುದು ಎಂಬುದನ್ನು ಕಾಣದೆಹೋದ. ಎಷ್ಟು ವಿಚಾರ ಮಾಡಿದರೂ ತಾನು ಮಾಡಿದ್ದೇ, ಮಾಡುತ್ತಿರುವುದೇ, ಸರಿ ಎಂಬ ನಿರ್ಧಾರಕ್ಕೆ ಬಂದು ಮುಟ್ಟುತ್ತಿದ್ದ.

## ೪
## ಕೃಷ್ಣಸ್ವಾಮಿಯ ಕನಸಿನ ಕಟ್ಟಡ

ನಡೆದ ಸಂಗತಿ ಇಷ್ಟು.

ಕೃಷ್ಣಸ್ವಾಮಿ ಚಿಕ್ಕ ವಯಸ್ಸಿನಲ್ಲಿಯೇ ತನ್ನ ತಾಯಿ ತಂದೆಗಳನ್ನು ಕಳೆದುಕೊಂಡು ತಬ್ಬಲಿಯಾಗಿ, ತನ್ನ ಸೋದರಮಾವನ ಮನೆಯಲ್ಲಿ ಬೆಳೆಯುತ್ತಿದ್ದ. ಸೋದರಮಾವ ಲಿಂಗಣ್ಣಯ್ಯನವರು ಹಳ್ಳಿಯ ಸ್ಕೂಲು ಮೇಷ್ಟ್ರು ; ಅವರಿಗೂ ಒಬ್ಬಳು ಮಗಳು, ಓದಿಸಬೇಕಾದ ಮೂವರು ಗಂಡು ಮಕ್ಕಳು. ಅವರ ಹಿರಿಯ ಮಗನೂ ಕೃಷ್ಣಸ್ವಾಮಿಯೂ ಓರಗೆಯವರು. ಸೋದರಳಿಯನನ್ನು ತಮ್ಮ ಮಗನಂತೆಯೇ ಭಾವಿಸಿ, ಹೊಟ್ಟೆಬಟ್ಟೆ ಕಟ್ಟಿ ಓದಿಸಿ, ಮಗಳನ್ನು ಅವನಿಗೇ ಕೊಡಬೇಕೆಂದು ಮಾಡಿಕೊಂಡಿದ್ದರು. ಹಿರಿಯಮಗ ಶಾಮಣ್ಣ ಕೃಷ್ಣಸ್ವಾಮಿ ಇಬ್ಬರೂ ಒಟ್ಟಿಗೆ ಲವರ್‌ಸೆಕಂಡರಿ ಪರೀಕ್ಷೆಗೆ ಕಟ್ಟಿ ತೇರ್ಗಡೆ ಹೊಂದಿದರು. ಆಗ ಲಿಂಗಣ್ಣಯ್ಯನವರು ತಮ್ಮನ್ನು ಟ್ರೇನಿಂಗ್ ಪರೀಕ್ಷೆಗೆ ಅರಿಸಿಕೊಳ್ಳುವ ಹಾಗೆ ಮಾಡಿ, ಮೈಸೂರಿಗೆ ಬಂದು ನೆಲಸಿ, ತಮ್ಮ ಹಿರಿಯ ಮಗ ಮತ್ತು ಕೃಷ್ಣಸ್ವಾಮಿ ಇಬ್ಬರನ್ನೂ ಅನಾಥಾಲಯಕ್ಕೆ ಸೇರಿಸಲು ಪ್ರಯತ್ನಪಟ್ಟರು. ನಿಜವಾಗಿಯೂ ಅನಾಥನಾಗಿದ್ದ ಕೃಷ್ಣಸ್ವಾಮಿಗೆ ಅನಾಥಾಲಯದಲ್ಲಿ ಸ್ಥಳ ಸಿಕ್ಕಿತು. ಒಬ್ಬರಿಗಾದರೂ ಸ್ಥಳ ಸಿಕ್ಕಲೆಂದೇ ಅವರು ಹೀಗೆ ಮಾಡಿದ್ದರು. ಕೃಷ್ಣಸ್ವಾಮಿ ಮೆಟ್ರಿಕ್ಯುಲೇಷನ್ ಪರೀಕ್ಷೆಯ ತರಗತಿಗೆ ಬಂದಾಗ, ತಮ್ಮ ಹನ್ನೊಂದು ವರ್ಷದ ಮಗಳು ರುಕ್ಮಿಣಿಯನ್ನು ಮದುವೆಮಾಡಿಕೊ ಎಂದು

ಅವರು ಅವನನ್ನು ಬಲವಂತ ಮಾಡಿದರು. ರುಕ್ಮಿಣಿಯೇನೋ ಚೆಲುವೆ ಯಾದ ಕನ್ಯೆ. ಅವಳನ್ನು ಮದುವೆಯಾಗಬೇಕೆಂದು ಅವನ ಮನಸ್ಸಿ ನಲ್ಲಿಯೂ ಆಸೆಯಿತ್ತು. ಅವನು ಸಂಪೂರ್ಣವಾಗಿ ಸೋದರಮಾವನ ಹಂಗಿ ನಲ್ಲೇ ಇದ್ದಿದ್ದರೆ ಒಪ್ಪಿಕೊಂಡುಬಿಡುತ್ತಿದ್ದನೇನೋ. ಈಗ ಅನಾಥಾಲಯ ದಲ್ಲಿದ್ದುದರಿಂದ ತಾನು ಸ್ವತಂತ್ರನೆಂಬ ಭಾವನೆ ಅವನಿಗುಂಟಾಗಿ, 'ನಾನು ಬಿ. ಎ ಪ್ಯಾಸ್ ಮಾಡುವವರೆಗೂ ಮದುವೆಯಾಗುವುದಿಲ್ಲ' ಎಂದು ಸೋದರಮಾವನಿಗೆ ಸ್ಪಷ್ಟವಾಗಿ ತಿಳಿಸಿಬಿಟ್ಟನು. ಅವರಿಗೆ ಖೇದವಾಯಿತು; ಮಗಳನ್ನು ಒಳ್ಳೆಯ ಕಡೆಗೇ ಕೊಟ್ಟು ಮದುವೆ ಮಾಡಬೇಕೆಂಬ ಹಟವೂ ಮೂಡಿತು. ಮೈಸೂರಿನಲ್ಲಿಯೇ ವರಾನ್ವೇಷಣಕ್ಕೆ ತೊಡಗಿದರು. ರಾಮ ರಾಯರೆಂಬ ಆಸ್ತಿವಂತರು ತಮ್ಮ ಹಿರಿಯಮಗ ಚಂದ್ರಶೇಖರನಿಗೆ ರುಕ್ಮಿಣಿ ಯನ್ನು ತಂದುಕೊಳ್ಳಲು ಒಪ್ಪಿದರು; ಆಸ್ತಿವಂತರು ತಮ್ಮ ಮಗನಿಗೆ ಬಡಕುಟುಂಬದ ಹೆಣ್ಣನ್ನು ತಂದುಕೊಳ್ಳಲು ಕಾರಣ ಭೂತರಾದವರು ಚಂದ್ರಶೇಖರನ ಮಲತಾಯಿ. ಮಲಮಗನಿಗೆ ಬಡವರ ಹೆಣ್ಣು ಸಾಕು ಎಂದು ಅವರ ತರ್ಕ. ಅಂತೂ ಆ ವರ್ಷ ರುಕ್ಮಿಣಿಗೆ ಮದುವೆಯಾಗಿಯೇ ಹೋಯಿತು. ಕೃಷ್ಣಸ್ವಾಮಿಗೂ ಸ್ವಲ್ಪ ಖೇದವಾಯಿತು: ತಾನು ಮದುವೆಯಾಗುವೆನೆಂದು ಆಸೆಪಟ್ಟಿದ್ದ ಹೆಣ್ಣು ತನಗೆ ತಪ್ಪಿಹೋಯಿತಲ್ಲಾ ಎಂದು. ಆದರೆ ಆ ಖೇದ ಬಹುಕಾಲ ನಿಲ್ಲಲಿಲ್ಲ. ಅವನು ಎಂಟ್ರೆನ್ಸ್ ತರಗತಿ ಯಲ್ಲಿದ್ದಾಗ, ಆಸ್ತಿವಂತರಾದ ನಾರಾಯಣಮೂರ್ತಿಗಳ ಅಳಿಯನಾಗುವ ಸುಯೋಗ ಅವನದಾಯಿತು; ಅವರ ಒಬ್ಬಳೇ ಮಗಳು ಭಾಗ್ಯಲಕ್ಷ್ಮಿಯ ಕೈಹಿಡಿದ. ಮದುವೆಗೆ ಮುನ್ನ ಅವರು, "ನನ್ನ ಮನೆಯಲ್ಲೆ ನೀನು ಓದಿಕೊಂಡಿರಬಹುದು ಬಿ. ಎ. ಪ್ಯಾಸಾದ ಮೇಲೆ ಎಲ್ಲಾದರೂ ಕೆಲಸಕ್ಕೆ ಸೇರಿಸುತ್ತೇನೆ. ಜೀವನದಲ್ಲಿ ನಿನ್ನನ್ನು ಒಂದು ನೆಲೆ ಸೇರುವಂತೆ ಮಾಡಲು ಸರ್ವಪ್ರಯತ್ನ ಮಾಡುತ್ತೇನೆ" ಎಂದು ಹೇಳಿದ್ದರು. ಅವರ ಮಾತನ್ನು ಅವರು ನಡಸಿದ್ದರು. ಅಲ್ಲದೆ ಅಳಿಯನಿಗೆ ಕೆಲಸವಾದ ಮೇಲೆ, ಬೆಂಗಳೂರಿ ನಲ್ಲೋ ಮೈಸೂರಿನಲ್ಲೋ ಒಂದು ಮನೆಯನ್ನೂ ಶ್ರೀರಂಗಪಟ್ಟಣದ ನಾಲೆಯ ಕೆಳಗೆ ಮೂರು ಎಕರೆ ಗದ್ದೆಯನ್ನೂ ಮಗಳಿಗೆ ತೆಗೆದು ಕೊಡುವುದಾಗಿಯೂ ಅವನಿಗೆ ಅವರು ಮಾತುಕೊಟ್ಟಿದ್ದರು.

ಚಂದ್ರಶೇಖರಯ್ಯ ಕೃಷ್ಣಸ್ವಾಮಿಗಿಂತ ಎರಡು ವರ್ಷ ಮೊದಲು ಬಿ ಎ. ಮಾಡಿದವನು. ಅವನು ಕೂಡಲೆ ಇಲಾಖೆಯ ಪರೀಕ್ಷೆಗಳನ್ನು ಮಾಡಿ, 'ಅಕೌಂಟೆಂಟ್' ಎನ್ನಿಸಿಕೊಂಡು ಆಗಲೇ ಎಂಬತ್ತು ರೂಪಾಯಿ ಸಂಬಳ ಪಡೆಯುತ್ತಿದ್ದನು. ಕೃಷ್ಣಸ್ವಾಮಿ ಗುಮಾಸ್ತೆಯಾಗಿ ಸೇರಿದಾಗ ಆಡಿಟ್ ಇಲಾಖೆಯಲ್ಲಿ ಚಂದ್ರಶೇಖರಯ್ಯನ ಕೈಕೆಳಗೇ ಕೆಲಸ ಮಾಡ ಬೇಕಾಗಿ ಬಂದಿತು. ಇಬ್ಬರೂ ಪರಸ್ಪರ ಚೆನ್ನಾಗಿ ಬಲ್ಲರು. ರುಕ್ಮಿಣಿಯ ಮದುವೆಗೆ ಕೃಷ್ಣಸ್ವಾಮಿ ಹೋಗಿದ್ದನು; ಇವನ ಮದುವೆಗೆ ಚಂದ್ರ ಶೇಖರನೂ ಬಂದಿದ್ದನು. ಈ ಬಾಂಧವ್ಯ ಪರಿಚಯಗಳಿಂದಾಗಿ, ಚಂದ್ರ ಶೇಖರಯ್ಯನ ಕೈಕೆಳಗೆ ಕೆಲಸ ಮಾಡಬೇಕಾಗಿ ಬಂದದ್ದು ಕೃಷ್ಣಸ್ವಾಮಿಯ ದುರದೃಷ್ಟ. ಚಂದ್ರಶೇಖರಯ್ಯ ಕೆಲಸದ ಮರ್ಮವನ್ನು ಬಲ್ಲವನು, ನುರಿ ತವನು; ಕೃಷ್ಣಸ್ವಾಮಿ ಅವನ ಕೈಕೆಳಗೆ ಕೆಲಸ ಕಲಿಯಬೇಕಾಗಿದ್ದವನು. ಕೃಷ್ಣಸ್ವಾಮಿ ಮಾಡಿದ ಲೆಕ್ಕಾಚಾರಗಳಲ್ಲಿಯೂ ಬರೆದ ಬರೆವಣಿಗೆಯಲ್ಲಿಯೂ ಕಂಡ ಲೋಪದೋಷಗಳನ್ನು ಕರ್ತವ್ಯದೃಷ್ಟಿಯಿಂದ ನಿರ್ದಾಕ್ಷಿಣ್ಯವಾಗಿ ಚಂದ್ರಶೇಖರಯ್ಯ ಎತ್ತಿತೋರಿಸುತ್ತಿದ್ದನು; ಕೃಷ್ಣಸ್ವಾಮಿ ಈ ವಿಚಾರವನ್ನು ಸರಿಯಾದ ಅರ್ಥದಲ್ಲಿ ಗ್ರಹಿಸದೆ ಚಂದ್ರಶೇಖರಯ್ಯ ತನ್ನ ವಿಚಾರದಲ್ಲಿ ಅನಾ ವಶ್ಯಕವಾಗಿ ಕಠಿನತೆಯಿಂದ ವರ್ತಿಸುತ್ತಿರುವನೆಂದು ತಪ್ಪು ತಿಳಿದನು. ದಂಡಿ ನಲ್ಲಿ ಸೋದರಮಾವನೆ? ಕಚೇರಿಯ ಆವರಣದಲ್ಲಿ ಇದ್ದಷ್ಟು ಕಾಲವೂ ಚಂದ್ರ ಶೇಖರಯ್ಯ ಇತರ ಕೈಕೆಳಗಿನ ಗುಮಾಸ್ತೆಗಳೊಡನೆ ಹೇಗೋ ಹಾಗೆ ಕೃಷ್ಣ ಸ್ವಾಮಿಯೊಡನೆಯೂ ಕಚೇರಿಯ 'ಬಿಗಿ'ಯಿಂದ ವರ್ತಿಸುತ್ತಿದ್ದನು. ಇದ ಕ್ಕಾಗಿಯೂ ಕೃಷ್ಣಸ್ವಾಮಿಗೆ ಅಸಮಾಧಾನ. ಅಲ್ಲದೆ, ಅವನು ಇವನನ್ನು ಏಕವಚನದಲ್ಲಿಯೇ ಸಂಬೋಧಿಸುತ್ತಿದ್ದನು; ತಾನು ಮಾತ್ರ ಅವನನ್ನು ಹೆಸರು ಹಿಡಿದು ಕೂಗಲೂ ಅವಕಾಶವಿಲ್ಲದೆ 'ಸರ್' ಎಂದೇ ಕರೆಯ ಬೇಕಾಗಿತ್ತು. ಬಹುವಚನ ಸಂಬೋಧನೆಯ ಭೂತ ಹೊರಗೂ ಬಿಡ ಲೊಲ್ಲದು: 'ಚಂದ್ರಶೇಖರಯ್ಯನವರೇ' ಎಂದು ಕರೆಯಬೇಕು. ಕೃಷ್ಣ ಸ್ವಾಮಿ ಕಚೇರಿಯಲ್ಲಿ ಅಲ್ಲಿನ ಮರ್ಯಾದೆ ಕಾರ್ಯಗೌರವಗಳಿಗೆ ಕಟ್ಟು ಬಿದ್ದು, ಹೊರಗೆ 'ಚಂದ್ರಶೇಖರ' ಎಂದು ಸಲಿಗೆಯಿಂದಲೇ ಸಂಬೋಧಿಸಿ ಅವನೊಡನೆ ಹೊಂದಿಕೊಂಡಿದ್ದರೆ ಅವನಾದರೂ ಈ ಹೊಂದಿಕೆಯ ನಡತೆ

ಯನ್ನು ಸ್ವಾಗತಿಸುತ್ತಲೇ ಇದ್ದನು. ಪ್ರಪಂಚದ ವಸ್ತುಸ್ಥಿತಿಯೊಂದಿಗೆ ನಾವು ಹೊಂದಿಕೊಳ್ಳಬೇಕೇ ಹೊರತು ನಮ್ಮ ಇಷ್ಟಾನುಸಾರ ಅದು ಮಾರ್ಪಾಟಾಗಬೇಕೆಂದು ಬಯಸುವುದು ತಿಳಿಗೇಡಿತನ. ಆದರೆ ಈ ತಿಳಿವು ಕೃಷ್ಣಸ್ವಾಮಿಗೆ ಉಂಟಾಗಲಿಲ್ಲ. ತಾನೂ ಒಂದು ಬಗೆಯ ಬಿಗಿಯಿಂದ ವರ್ತಿಸತೊಡಗಿದನು; ಅವನು ಲೋಪದೋಷಗಳನ್ನು ತೋರಿಸಿದಾಗ ಮುಖಭಂಗಿಯಿಂದಲೂ ಮಾಡಬೇಕಾದ ಕೆಲಸವನ್ನು ವೇಳೆಗೆ ಸರಿಯಾಗಿ ಮಾಡದಿರುವುದರಿಂದಲೂ ತನ್ನ ಅಸಮಾಧಾನವನ್ನು ತೋರಿಸತೊಡಗಿದನು. ಕೃಷ್ಣಸ್ವಾಮಿಯ ನಡತೆಯ ಒಳಗು ಚಂದ್ರಶೇಖರಯ್ಯನ ಅರಿವಿಗೆ ಬಾರದೆಹೋಗಲಿಲ್ಲ. ಕೃಷ್ಣಸ್ವಾಮಿ ತನ್ನ ಕೈಯನ್ನು ಹಿಂದಕ್ಕೆ ತೆಗೆದುಕೊಂಡಮಾತ್ರಕ್ಕೆ ತಾನು ತನ್ನ ಕೈಯನ್ನು ಅವನ ಕಡೆಗೆ ನೀಡಿ ಅವನನ್ನು ತನ್ನ ಬಳಿಗೆ ಸ್ನೇಹದಿಂದ ಕರೆದುಕೊಳ್ಳಲು ಅಡ್ಡಿಯೇನಿಲ್ಲವಲ್ಲ? ಕೃಷ್ಣಸ್ವಾಮಿ ಪರಕೀಯನೂ ಅಲ್ಲ. ತನ್ನ ಮಾವನ ಸೋದರಳಿಯ. ಅನಪೇಕ್ಷಿತವಾಗಿ, ಅನಿವಾರ್ಯವಾಗಿ, ತಮ್ಮಿಬ್ಬರ ನಡುವಣ 'ಸ್ನೇಹ' ತಪ್ಪಿದ ಸಂಬಂಧಕ್ಕೆ ಮಾಧುರ್ಯವನ್ನು ಬೆರಸಲೋಸುಗ ತಮ್ಮ ಮನೆಗೆ ಆಗಾಗ್ಗೆ ಬರುತ್ತಿರುವಂತೆ ಚಂದ್ರಶೇಖರಯ್ಯ ಕೃಷ್ಣಸ್ವಾಮಿಗೆ ಆಹ್ವಾನವನ್ನೂ ನೀಡಿದ್ದ ಆಗ ಕೃಷ್ಣಸಾಮಿ ಒಂದು ಹೋಟೆಲಿನಲ್ಲಿದ್ದ; ಇನ್ನೂ ಸಂಸಾರ ಹೂಡಿರಲಿಲ್ಲ. ಆ ಆಹ್ವಾನಕ್ಕೆ ಮನ್ನಣೆಕೊಡುವುದರ ಬದಲು ಅದನ್ನು 'ದೊಡ್ಡಸ್ತಿಕೆಯ ವರ್ತನೆ' ಎಂದು ಭಾವಿಸಿದ. ಇದ್ದಕ್ಕಿದ್ದಹಾಗೆ ಅವನಿಗೆ ರುಕ್ಮಿಣಿಯನ್ನು ನೋಡಬೇಕೆನ್ನಿಸಿತು. ಚಂದ್ರಶೇಖರಯ್ಯ ನಿಲ್ಲದಿರುವ ವೇಳೆಯಲ್ಲಿಯೇ ಅವನ ಮನೆಗೆ ಹೋದ. ರುಕ್ಮಿಣಿ ಅವನನ್ನು ಬಹು ಆದರದಿಂದ ಸತ್ಕಾರಮಾಡಿದಳು. ಅವನ ಕಣ್ಣಿಗೆ ರುಕ್ಮಿಣಿ ಭಾಗ್ಯ ಲಕ್ಷ್ಮಿಗಿಂತಲೂ ಚೆಲುವೆಯಾಗಿ ಕಂಡಳು. ಹಳೆಯ ವಾಂಛಲ್ಯ ಅವನನ್ನು ಕಾಡತೊಡಗಿತು. ತನಗೆ ಆಗಬೇಕಾಗಿದ್ದ ಹೆಣ್ಣು ಚಂದ್ರಶೇಖರನ ಪಾಲಾದಳಲ್ಲಾ ಎಂದು ಅವನ ಮೇಲೆ ನಿಷ್ಕಾರಣವಾದ ಮಾತ್ಸರ್ಯ ಹುಟ್ಟಿತು. ರುಕ್ಮಿಣಿಯನ್ನು ಕಂಡು ಅವಳೊಡನೆ ಸರಸವಾಗಿ ಮಾತಾಡುವ ಉದ್ದೇಶದಿಂದಲೇ ಚಂದ್ರಶೇಖರಯ್ಯನ ಮನೆಗೆ ಅವನಿಲ್ಲದ ವೇಳೆಯಲ್ಲಿ ಎರಡು ಮೂರು ಸಲ ಹೋಗಿದ್ದ. ಅವಳ ಓದೂ ಭಾಗ್ಯಲಕ್ಷ್ಮಿಯಷ್ಟೆ. ಆದರೂ,

ಹಳ್ಳಿಯ ಹುಡುಗಿಯಾಗಿ ಅವಳು ನಾಗರಿಕ ಜೀವನದೊಂದಿಗೆ ಹೆಚ್ಚು ಸಮರಸವಾಗಿ ಹೊಂದಿಕೊಂಡಿದ್ದುದು ಅವಳ ಉಡಿಗೆ ತೊಡಿಗೆಗಳಲ್ಲಿಯೂ ಮಾತುಕತೆಗಳಲ್ಲಿಯೂ ಅವನಿಗೆ ಮೂಡಿ ಕಾಣುತ್ತಿತು. ಮೈಸೂರಿನಲ್ಲಿಯೇ ಹುಟ್ಟಿಬೆಳೆದ ತನ್ನ ಹೆಂಡತಿಯನ್ನು ರುಕ್ಮಿಣಿಗೆ ಹೋಲಿಸಲಾಗಿ ಅವಳು ಹಳ್ಳಿಯ ಹುಡುಗಿಯಂತೆ ತೋರತೊಡಗಿದಳು. ಚಂದ್ರಶೇಖರಯ್ಯನ ಮೇಲೆ ಮಾತ್ಸರ್ಯ ಇನ್ನಷ್ಟು ಮನೆಯಿತು ಕೃಷ್ಣಸ್ವಾಮಿ ಎರಡು ಮೂರು ಸಲ ತನ್ನ ಮನೆಗೆ ಬಂದಿದ್ದುದು ಹೆಂಡತಿಯಿಂದ ತಿಳಿದುಬಂದು, "ನೀನು ಎರಡು ಮೂರು ಸಲ ಮನೆಯ ಕಡೆ ಬಂದಿದ್ದೆಯಂತೆ. ಬಹಳ ಸಂತೋಷ. ನಾನೂ ಮನೆಯಲ್ಲಿರುವಾಗ ಬಾ" ಎಂದು ಚಂದ್ರಶೇಖರಯ್ಯ ಹೇಳಿದಾಗ, "ತನ್ನ ನಡತೆಯನ್ನು ಚಂದ್ರಶೇಖರ ಶಂಕಿಸುತ್ತಿದಾನೆ" ಎಂದು ಭಾವಿಸಿ ಕೃಷ್ಣಸ್ವಾಮಿ ಅವನ ಮನೆಗೆ ಅಂದಿನಿಂದ ಮುಂದೆ ಹೋಗಲೇ ಇಲ್ಲ. ಹೀಗೆ ಕೃಷ್ಣಸ್ವಾಮಿ ತನ್ನ ಮತ್ತು ಚಂದ್ರಶೇಖರಯ್ಯನ ನಡುವೆ ಒಂದು ಗೋಡೆಯನ್ನು ಕಟ್ಟಿದ. ಆ ಗೋಡೆಯನ್ನು ಒಡೆಯಲು ಚಂದ್ರಶೇಖರಯ್ಯ ಮಾಡಿದ ಪ್ರಯತ್ನಗಳು ವಿಫಲವಾದುವು ಹೀಗೆಯೇ ಮುಂದುವರಿದರೆ ಸಂಬಂಧ ಹೆಚ್ಚು ಹಳಸಿಕೊಳ್ಳುತ್ತದೆಯೆಂದು ಭಾವಿಸಿ, ಮೇಲಿನ ಅಧಿಕಾರಿಗಳಿಗೆ ಈ ಸೂಕ್ಷ್ಮವನ್ನು ಅರುಹಿ, ಕೃಷ್ಣಸ್ವಾಮಿಯನ್ನು ಬೇರೆಯ ಇಲಾಖೆಗೆ ವರ್ಗಮಾಡಿಸಿ, ಅವನೊಡನೆ ಸಲಿಗೆಯಿಂದಿರಲು ಚಂದ್ರಶೇಖರಯ್ಯ ಮತ್ತೆ ಪ್ರಯತ್ನಪಟ್ಟ. ಕೃಷ್ಣಸ್ವಾಮಿಯನ್ನು ಕವಿದಿದ್ದ ಮಂಕು ಅವನನ್ನು ಬಿಡಲಿಲ್ಲ. ಬೇರೆ ಇಲಾಖೆಗೆ ವರ್ಗವಾದದ್ದನ್ನು ಚಂದ್ರಶೇಖರಯ್ಯನಿಂದ ತನಗೆ ಆದ ಶಿಕ್ಷೆ ಎಂದು ತಿಳಿದ. ಹೀಗೆ ವರ್ಗ ವಾಗುವುದಕ್ಕೆ ಕೆಲವು ತಿಂಗಳುಗಳ ಹಿಂದೆ ಮಾತ್ರ ಕೃಷ್ಣಸ್ವಾಮಿ ಭಾಗ್ಯ ಲಕ್ಷ್ಮಿಯನ್ನು ಕರೆಯಿಸಿಕೊಂಡು ಸಂಸಾರ ಹೂಡಿದ್ದ. ಕಚೇರಿಯ ಕಾರಣ ದಿಂದ ತನ್ನ ಸೌಮನಸ್ಯವನ್ನು ಕಳೆದುಕೊಂಡಿದ್ದ ಕೃಷ್ಣಸ್ವಾಮಿ, ಅತ್ತೆಯ ಮೇಲಿನ ಕೋಪ ಕೊತ್ತಿಯ ಮೇಲೆ ಎನ್ನುವಂತೆ, ತನ್ನ ಹೆಂಡತಿ ಯೊಂದಿಗೂ ಬಿಗಿಯಿಂದಲೇ ವರ್ತಿಸತೊಡಗಿದ. ಜೊತೆಗೆ ರುಕ್ಮಿಣಿಯ ನೆನಪು ಬೇರೆ. ಗಂಡನ ಸ್ವಭಾವವೇ ಹೀಗೆ ಎಂದುಕೊಂಡು ಅವನ ಸ್ವಭಾವಕ್ಕೆ ಹೊಂದಿಕೊಂಡು, ಹೆದರಿಕೊಂಡು, ನಡೆದುಕೊಳ್ಳುತ್ತಿದ್ದಳು ಭಾಗ್ಯಲಕ್ಷ್ಮಿ

ಪರಿಸ್ಥಿತಿಯಿಂದ ಪ್ರಸ್ಫುಟಗೊಂಡಿದ್ದ ಅವಳ ಸಹಜವಾದ ಪತಿಭಕ್ತಿ ರುಕ್ಮಿಣಿಯ ಸರಸಸಂಭಾಷಣೆಯೊಂದಿಗೆ ಪೆಚ್ಚಾಗಿ ಕಾಣತೊಡಗಿತು. ಕಚೇರಿಯಲ್ಲಿ ಹಾಗೆ; ಮನೆಯಲ್ಲಿ ಹೀಗೆ. ತಾನೇ ಒತ್ತಿಕೊಂಡ ಇಕ್ಕುಳಕ್ಕೆ ಸಿಲುಕಿ ಅವನ ಮನಸ್ಸು ಮಿಲಮಿಲಗುಟ್ಟುತ್ತಿತ್ತು.

ಹೀಗಿರಲು, ಮೇಲಿನ ಅಧಿಕಾರಿಗಳಲ್ಲಿ ಆದ ಬದಲಾವಣೆಗಳಿಂದ, ಚಂದ್ರಶೇಖರಯ್ಯನಿಗೆ ಗೊತ್ತಿಲ್ಲದಂತೆಯೇ ಅವನನ್ನು ಕೃಷ್ಣಸ್ವಾಮಿಯಿದ್ದ ಇಲಾಖೆಗೆ ಸೂಪರಿಂಟೆಂಡೆಂಟರಾಗಿ ಸಂಬಳವನ್ನೂ ಪದವಿಯನ್ನೂ ಹೆಚ್ಚಿಸಿ ವರ್ಗ ಮಾಡಲಾಯಿತು. ಎಲ್ಲಿ ಹೋದರೂ ಭೇತಾಳ ಬೆನ್ನು ಬಿಡದಲ್ಲ ಎನ್ನಿಸಿತು ಕೃಷ್ಣಸ್ವಾಮಿಗೆ. ಮಗಳನ್ನು ಬಿಟ್ಟು ಹೋಗಲು ಬಂದಿದ್ದ ನಾರಾಯಣಮೂರ್ತಿಗಳು ತಾವು ಹಿಂದೆ ಕೊಟ್ಟಿದ್ದ ಆಶ್ವಾಸನವನ್ನು ಮತ್ತೆ ಉಚ್ಚರಿಸಿದ್ದರು. ಕೃಷ್ಣಸ್ವಾಮಿಗೆ ಅದರ ನೆನಪಾಯಿತು. ಏನೋ ತೋರಿತು. ತಾನು ಎಂ. ಸಿ. ಎಸ್. ಪರೀಕ್ಷೆಗೆ ಕುಳಿತು ರ್‍ಯಾಂಕ್ ಪಡೆದು ಅಸಿಸ್ಟೆಂಟ್ ಕಮಿಷನರಾಗಿ ಚಂದ್ರಶೇಖರಯ್ಯನ ತಲೆಯ ಮೇಲೆ ಕುಳಿತುಕೊಳ್ಳುತ್ತೇನೆ, ಇಲ್ಲವೆ ಲಾಯರ್ ಪರೀಕ್ಷೆಗೆ ಓದಿ ಅಡ್ವೋಕೇಟಾಗಿ ಸ್ವತಂತ್ರನಾಗಿರುತ್ತೇನೆ ಎಂದು ಭವ್ಯವಾದ ಕನಸಿನ ಕಟ್ಟಡವೊಂದನ್ನು ಕಟ್ಟಿದನು. ಅದಕ್ಕೆ ಅಡಿಗಟ್ಟಡವೋ ಎಂಬಂತೆ ಯಾವ ಕಾರಣವನ್ನೂ ಕೊಡದೆ ತನ್ನ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ಒಂದು ಧೀರ ಕಾರ್ಯವನ್ನೆಸಗಿದಂತೆ ಭಾವಿಸಿಕೊಳ್ಳತೊಡಗಿದನು.

## ೫
## ಫೆಲ್ಟ್‌ಕ್ಯಾಪ್‌–ಖಾದಿಟೋಪಿ

ಈ ಹಿಂದಿನ ಸಂಗತಿಗಳನ್ನೆಲ್ಲಾ ನೆನೆನೆನೆದಂತೆ ರಾತ್ರಿಯೆಲ್ಲ ನಿದ್ದೆ ಬಾರದೆ ಹಾಸಿಗೆಯಲ್ಲಿ ಹೊರಳಾಡುತ್ತ ಕೃಷ್ಣಸ್ವಾಮಿ ಅದು ಹೇಗೋ ರಾತ್ರಿಯನ್ನೆಲ್ಲಾ ಕಳೆದನು. ಅವನ ಮನಸ್ಸು ಇನ್ನೂ ಹೊಯ್ದಾಡುತ್ತಲೇ ಇದ್ದಿತು. ಮಾವನವರೊಂದಿಗೆ ವಿಷಯವನ್ನು ಪ್ರಸ್ತಾಪಿಸುವ ನಿರ್ಧಾರಕ್ಕೆ ಅವನಿನ್ನೂ ಬಂದಿರಲಿಲ್ಲ. ಸ್ನಾನ ಸಂಧ್ಯಾವಂದನೆಮಾಡಿ, ಕಾಫಿ ತಿಂಡಿ ತೆಗೆದುಕೊಂಡಾದಮೇಲೆ, ಸುತ್ತಾಡಿಕೊಂಡು ಬರಲು ಹೊರಕ್ಕೆ ಹೊರಟನು.

ಲ್ಯಾನ್ಸ್‌ಡೌನ್ ಬಜಾರಿನ ಮುಂದೆ ಹೋಗುತ್ತಿದ್ದಾಗ ಯಾರೋ ಹೆಸರು ಹಿಡಿದು ಕೂಗಿದಹಾಗಾಯಿತು. ಕೂಗಿದ ಧ್ವನಿ ಒಂದು ಅಂಗಡಿಯು ಕಡೆಯಿಂದ ಬಂದ ಹಾಗೆ ಕೇಳಿಸಿತು. ಕೃಷ್ಣಸ್ವಾಮಿ ಬೀದಿಯಲ್ಲಿಯೇ ನಿಂತು ಧ್ವನಿ ಬಂದತ್ತ ತಿರುಗಿನೋಡಿದನು. "ಬಾರಯ್ಯಾ ಕಿಟ್ಟು, ಏನು ಮರೆತು ಬಿಟ್ಟೆಯಾ?" ಎಂದು ಒಂದು ಅಂಗಡಿಯ ಮುಂದೆ ನಿಂತಿದ್ದ ವ್ಯಕ್ತಿ ಕರೆದನು.

ಕರೆದವನು ಶಾಮಣ್ಣ; ಕೃಷ್ಣಸ್ವಾಮಿಯ ಸೋದರಮಾವನ ಮಗ; ರುಕ್ಮಿಣಿಯ ಅಣ್ಣ.

"ಓಹೋ, ಶಾಮಣ್ಣನೇ! ನಿನ್ನ ಗುರುತೇ ಸಿಕ್ಕಲಿಲ್ಲವಲ್ಲೊ! ಇದೇನು, ನಿನ್ನ ವೇಷ! ಬಾ, ಸ್ವಲ್ಪ ಸುತ್ತಾಡಿಕೊಂಡು ಬರೋಣ" ಎಂದು ಕೃಷ್ಣಸ್ವಾಮಿ ಶಾಮಣ್ಣನ ಹತ್ತಿರಕ್ಕೆ ಹೋಗಿ ಪ್ರಸನ್ನನಾಗಿಯೇ ಮಾತನಾಡಿಸಿದ.

"ಅಂಗಡಿ ಹೇಗೆ ಬಿಟ್ಟುಬರಲೋ ಕಿಟ್ಟು? ಆಳುಕಾಳು ಯಾರೂ ಇಲ್ಲ. ಸಾವುಕಾರ ಕೋಲುಕಾರ ಎಲ್ಲ ನಾನೇ" ಎಂದು ಕೈಲಿಹಿಡಿದಿದ್ದ ಗಜಕಡ್ಡಿಯನ್ನು ಆಡಿಸುತ್ತ ನಕ್ಕ.

"ಓಹೋ, ನನಗೆ ತಿಳಿಯದು. ನಿನ್ನ ಅಂಗಡಿಯೋ? ಎಂಥ ಅಂಗಡಿ?"

"ಬೋರ್ಡು ಬರೆದುಹಾಕಿದೆಯಲ್ಲಾ, ನೋಡಲಿಲ್ಲವೆ?" ಕೃಷ್ಣ ಸ್ವಾಮಿ ಮತ್ತೆ ಬೀದಿಯಕಡೆ ಹೋಗಿ 'ಸ್ವದೇಶೀಭಂಡಾರ' ಎಂಬ ಬೋರ್ಡನ್ನು ನೋಡಿ, ಹಿಂತಿರುಗಿ ಬಂದು, ಅಂಗಡಿಯೊಳಗೆ ಇದ್ದ ಒಂದು ಚಾಯಿಕಾಯಿ ಪೆಟ್ಟಿಗೆಯ ಮೇಲೆ ಕುಳಿತ.

ಕೃಷ್ಣಸ್ವಾಮಿ ಐದು ನಿಮಿಷಗಳ ಕಾಲ ಅಂಗಡಿಯೊಳಗೆಲ್ಲಾ ಕಣ್ಣಾಡಿಸಿದ; ಎದ್ದು, ಅಂಗಡಿಯಲಿ ಮಾರಾಟಕ್ಕೆ ಇಟ್ಟಿದ್ದ ಸರಕನ್ನೆಲ್ಲಾ ಪರಿಶೀಲಿಸಿದ. ಅಂಗಡಿ ಕಡೆಕಡೆಯ ಮೂಲೆಯಲ್ಲಿದ್ದ ಬಹು ಕಿರಿದಳತೆಯ ಅಂಗಡಿ, ಸರಕು ಹೆಚ್ಚೇನೂ ಇರಲಿಲ್ಲ: ಕೆಲವು ಥಾನು ಸ್ವದೇಶೀಬಟ್ಟೆ, ಒಂದೆರಡು ಥಾನು ಖಾದಿ ಬಟ್ಟೆ, ಎಂಟುಹತ್ತು ಜೊತೆ ಚಪ್ಪಲಿಗಳು,

ಬರೆವಣಿಗೆಯ ಸಾಮಗ್ರಿ, ಕೆಲವು ಗಾಜಿನ ಶೀಸೆಗಳಲ್ಲಿ ಪೆಪ್ಪರಮೆಂಟು ಬಿಸ್ಕತ್ತು–ಇಷ್ಟೆ. ಒಂದು ಮೂಲೆಯಲ್ಲಿ ಚರಕವೊಂದು ಇದ್ದಿತು.

ಶಾಮಣ್ಣ ಶೀಸೆಯಿಂದ ಪೆಪ್ಪರುಮೆಂಟುಗಳನ್ನು ತೆಗೆದು ಕೃಷ್ಣ ಸ್ವಾಮಿಯ ಕೈಗೆ ಹಾಕಿದ. ಅವನು ಒಂದನ್ನು ಬಾಯಿಗೆ ಹಾಕಿಕೊಂಡು ಚಪ್ಪರಿಸುತ್ತ ಮಾತಿಗೆ ಮೊದಲು ಮಾಡಿದ :

"ಏನು ಶಾಮಣ್ಣ, ಹಾಗಾದರೆ ಕೆಲಸ ಬಿಟ್ಟುಬಿಟ್ಟೆಯಾ ?"

"ಏನು ಕಿಟ್ಟು, ನೀನು ಯಾವ ಮೂಲೆಯಲ್ಲಿ ಇದ್ದೀಯೆ? ಬೆಂಗಳೂರು ಷಹರಿನಲ್ಲಿದ್ದುಕೊಂಡು ಪೇಪರುಗೀಪರು ಓದುವುದೇ ಇಲ್ಲವೋ ?"

ವಾಸ್ತವವಾಗಿ ಕೃಷ್ಣಸ್ವಾಮಿ ಯಾವ ವೃತ್ತಪತ್ರಿಕೆಯನ್ನೂ ಎಂದೂ ಕೈಯಿಂದ ಮುಟ್ಟಿದವನೇ ಅಲ್ಲ. ತನ್ನ ಉದ್ಯೋಗದಲಿ ಮೇಲುಮೇಲಿನ ಪದವಿಗಳಿಗೆ ಏರುವುದು ಹೇಗೆ, ಚಂದ್ರಶೇಖರನ ತಲೆಮೆಟ್ಟಿ ನಿಲ್ಲುವುದು ಎಂದು, ಒಂದು ವೇಳೆ ತನ್ನ ಮಾವನವರು ಮನೆಯನ್ನೂ ಗದ್ದೆಯನ್ನೂ ಕೊಡದೆಹೋದರೆ ತಾನು ಅವುಗಳನ್ನು ಸಂಪಾದನೆ ಮಾಡುವ ಬಗೆ ಹೇಗೆ, ಅನಾಗರಿಕ ಸ್ತ್ರೀಯಂತಿರುವ ಭಾಗ್ಯಲಕ್ಷ್ಮಿಯನ್ನು ನಾಗರಿಕರಮಣಿಯನ್ನಾಗಿ ಪರಿವರ್ತಿಸುವುದು ಹೇಗೆ, ಮೇಲುಮೇಲಕ್ಕೆ ಏರಿದಂತೆ ತನ್ನ ರೀತಿ ನೀತಿ ರೂಪರಚನೆ ವೇಷಭೂಷಗಳಲ್ಲಿ ಕಾಲಕ್ಕೆ ತಕ್ಕಂತೆ ಮಾರ್ಪಾಟುಗಳನ್ನು ಮಾಡಿಕೊಳ್ಳುವುದು ಹೇಗೆ?– ಇವೇ ಅವನ ಮನಸ್ಸನ್ನು ಆಕ್ರಮಿಸಿದ್ದ ಪ್ರಶ್ನೆಗಳಾಗಿದ್ದವು ಅವನಿಗೆ ತನ್ನ ಸುತ್ತಮುತ್ತಣ ಪರಿಸ್ಥಿತಿಯ ಅರಿವಾಗಲಿ, ದೇಶದಲಿ ಮೂಡಿ ಹಬ್ಬುತ್ತಿದ್ದ ರಾಜಕೀಯ ನವಜಾಗ್ರತಿಯ ಬೆಳಕಿನ ಅರಿವಾಗಲಿ ಉಂಟಾಗಿರಲಿಲ್ಲ. ಸ್ವಾರ್ಥದ ಹೊಂಗನಸು ಕಾಣುತ್ತ ನಿದ್ದೆಮಾಡುತ್ತಿದ್ದ ಕೋಟ್ಯನುಕೋಟಿ ಪ್ರಜೆಗಳಲ್ಲಿ ಅವನೂ ಒಬ್ಬನಾಗಿದ್ದನು. ಈ ವಿಚಾರದಲ್ಲಿ ವ್ಯಕ್ತಿಗತವಾಗಿ ಅವನ ಅಪರಾಧವಾಗಲಿ ದೋಷವಾಗಲಿ ಯಾವುದೂ ಇರಲಿಲ್ಲ.

"ಏನು, ನೀನು ಕೆಲಸ ಬಿಟ್ಟದ್ದು ಪೇಪರಿನಲ್ಲಿಯೂ ಬಂದಿತ್ತೆ !" ಎಂದು ಕೃಷ್ಣಸ್ವಾಮಿ ಆಶ್ಚರ್ಯದಿಂದ ಕೇಳಿದ.

"ನಾನು ಕೆಲಸ ಬಿಟ್ಟಿದ್ದಲ್ಲವೋ ಮಹರಾಯ! ಗಾಂಧಿಯವರ ಹೆಸರನ್ನು ಕೇಳಿಲ್ಲವೋ ನೀನು? ಲೋಕಮಾನ್ಯ ತಿಲಕರು ಹೋದಮೇಲೆ ಗಾಂಧಿಯವರೇ ಈಗ ದೇಶದ ನಾಯಕರಾಗಿದಾರೆ. ಸತ್ಯಾಗ್ರಹ, ಪರದೇಶೀ ವಸ್ತ್ರ ಬಹಿಷ್ಕಾರ, ಸ್ವದೇಶೀ ವ್ರತ. ಖಾದಿ—ಇವೇ ಅವರು ಸ್ವರಾಜ್ಯ ಪಡೆಯಲು ನಮಗೆ ಉಪದೇಶಿಸಿರುವ ಮಂತ್ರಗಳು. ಲಾಯರುಗಳೂ ಶಾಲೆಯ ವಿದ್ಯಾರ್ಥಿಗಳೂ ಕೋರ್ಟುಗಳನ್ನೂ ಶಾಲೆಗಳನ್ನೂ ಬಹಿಷ್ಕರಿಸ ಬೇಕೆಂದು ನಾಗಪುರದ ಕಾಂಗ್ರೆಸ್ಸು ತೀರ್ಮಾನಿಸಲಿಲ್ಲವೆ? ಇಲ್ಲಿ ಬೆಂಗಳೂರಿನಲ್ಲಿ ಎಷ್ಟೋ ಜನ ಲಾಯರುಗಳು ಹಾಗೆ ಮಾಡಲಿಲ್ಲವೆ? ೧೯೨೧ ರ ಚಳುವಳಿಯ ವಿಷಯ ನಿನಗೆ ಗೊತ್ತಿಲ್ಲವೆ? ಈಗ ಚಳುವಳಿಯೇನೂ ಇಲ್ಲ. ಆದರೂ, ಸರ್ಕಾರದ ಗುಲಾಮಗಿರಿ ಯಾಕೆ ಅಂತ ಮೇಷ್ಟರ ಕೆಲಸಕ್ಕೆ ರಾಜಿನಾಮೆ ಕೊಟ್ಟೆ. ಇಲ್ಲಿ ಶಾರದವಿಲಾಸ ಹೈಸ್ಕೂಲಿನಲ್ಲೋ ಬೆಂಗಳೂರು ರಾಷ್ಟ್ರೀಯ ವಿದ್ಯಾಶಾಲೆಯಲ್ಲೋ ಕೆಲಸ ಸಿಕ್ಕಿದರೆ ಸಂತೋಷವಾಗಿ ಮತ್ತೆ ಕೆಲಸಕ್ಕೆ ಸೇರಿಕೊಳ್ಳುತ್ತೇನೆ. ಇಲ್ಲದೆ ಹೋದರೆ ನನಗೆ ಈ ಚಿಕ್ಕ ಅಂಗಡಿಯೇ ಸಾಕು. ನನ್ನೊಬ್ಬನ ಜೀವನಕ್ಕೆ ಎಷ್ಟಾಗಬೇಕು?"

ಶಾಮಣ್ಣ ಹೇಳಿದ ಮಾತುಗಳನ್ನು ಕೇಳಿ ಕೃಷ್ಣಸ್ವಾಮಿಗೆ ಆಶ್ಚರ್ಯ ವಾಯಿತು. ಅವನೂ ತಿಲಕ್, ಗಾಂಧಿ, ಕಾಂಗ್ರೆಸ್ಸು, ಸತ್ಯಾಗ್ರಹ— ಈ ಹೆಸರುಗಳನ್ನು ಕೇಳಿಬಲ್ಲ. ಆದರೆ, ಆ ವಿಚಾರಗಳಲ್ಲಿ ಅವನು ಏನೇನೂ ಆಸಕ್ತಿ ವಹಿಸಿರಲಿಲ್ಲ, ಅಷ್ಟೆ. ಚಳವಳಿಯ ಕಾರಣ ಕೂಡ ಇಲ್ಲದೆ ಶಾಮಣ್ಣ ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದುದು ಶುದ್ಧ ಹುಚ್ಚುಗೆಲಸ ಎನ್ನಿಸಿತು ಇವನಿಗೆ. ತಾನು ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟದ್ದು ಮಾತ್ರ ಸರಿ ಎನ್ನಿಸಿತ್ತು! ಕೆಲವು ಕ್ಷಣಗಳು ಮೌನವಾಗಿದ್ದು, ಕೃಷ್ಣಸ್ವಾಮಿ ಹೇಳಿದ:

"ನಾನೂ ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಟ್ಟೆ ಕಣೋ ಶಾಮಣ್ಣ."

"ನಿಜವಾಗಿಯೂ!"—ಶಾಮಣ್ಣನಿಗೆ ಆಶ್ಚರ್ಯವಾಯಿತು. ನಂಬಲಾಗಲಿಲ್ಲ.

"ಹಾಗಾದರೆ ಆ ನರ್ಜಕೋಟನ್ನು ಕಿತ್ತು ಆಚೆಗೆ ಬಿಸಾಡು, ಸುಟ್ಟುಹಾಕು!"—ಎಂದ ಶಾಮಣ್ಣ, ಉದ್ವೇಗದಿಂದ.

"ಯಾಕೋ?" ಎಂದು ನಗುತ್ತ ಕೇಳಿದ ಕೃಷ್ಣಸ್ವಾಮಿ.

"ಹಾಗಾದರೆ ನೀನು ಕೆಲಸ ಬಿಟ್ಟದ್ದು ಯಾಕೆ?"

"ನಿಮ್ಮ ಭಾವ..........." ಎಂದು ಕೃಷ್ಣಸ್ವಾಮಿ ತಾನು ಹೇಳ ಹೊರಟಿದ್ದ ಮಾತನ್ನು ಅರ್ಧಕ್ಕೇ ನಿಲ್ಲಿಸಿದ. ಚಂದ್ರಶೇಖರಯ್ಯನ ನಿಮಿತ್ತದಿಂದ ತಾನು ಕೆಲಸವನ್ನು ಬಿಡಬೇಕಾಗಿ ಬಂದಿತು ಎಂದು ಹೇಳಬೇಕೆಂದಿದ್ದ. ಶಾಮಣ್ಣ ಎಷ್ಟೇ ಆಗಲಿ ಚಂದ್ರಶೇಖರಯ್ಯನ ಭಾವಮೈದುನ; ತನ್ನ ಭಾವನ ಕಡೆ ಸಹಜವಾಗಿ ಒಲವುಳ್ಳವನು; ಅವನನ್ನೇ ವಹಿಸಿಕೊಂಡು ಮಾತಾಡುತ್ತಾನೆ—ಎಂದೆಣಿಸಿ ತಾನು ಆಡಬೇಕೆಂದಿದ್ದ ಮಾತನ್ನು ನುಂಗಿಕೊಂಡ.

"ಏನು, ನಮ್ಮ ಭಾವನ ವಿಚಾರ? ಅವನೂ ಕೆಲಸ ಬಿಟ್ಟನೋ?"

"ಇಲ್ಲ ಇಲ್ಲ. ಅಂಥಾದ್ದೇನೂ ಇಲ್ಲ. ಅವನೂ ಭರ್ಜರಿಯಾಗಿ ಸೂಟೇ ಹಾಕಿಕೊಳ್ಳುತ್ತಾನೆ."

"ನಾನು ಬೆಂಗಳೂರಿಗೆ ಹೋಗುವ ಪ್ರಮೇಯ ಬಿದ್ದರೆ ನಮ್ಮ ಭಾವನಿಗೂ ಹೇಳುತ್ತೇನೆ: ಸೂಟು ಧರಿಸಬೇಕಾದರೆ ಖಾದಿ ಸೂಟು ಧರಿಸು ಅಂತ. ರುಕ್ಮಿಣಿಗೂ ಹೇಳುತ್ತೇನೆ, ಖಾದಿ ಸೀರೆ ಉಡು ಅಂತ. ಗಾಂಧಿಯವರೂ ಕೂಡ ಸರ್ಕಾರಿ ನೌಕರರೆಲ್ಲರೂ ಕೆಲಸ ಬಿಡಬೇಕು ಅಂತ ಹೇಳಿಲ್ಲ. ಸರ್ಕಾರದ ಕೆಲಸದಲ್ಲಿದ್ದುಕೊಂಡೇ ಖಾದಿ ಧರಿಸಿ, ರಾಜಕೀಯ ಸಭೆಗಳಿಗೆ ಧೈರ್ಯವಾಗಿ ಬಂದು ದೇಶದ ಸ್ಥಿತಿಗತಿಗಳನ್ನು ತಿಳಿದುಕೊಳ್ಳಿ, ನಿಮ್ಮ ಕೆಲಸ ಕಾರ್ಯಗಳನ್ನು ನಿರ್ವಂಚನೆಯಿಂದ ಪ್ರಾಮಾಣಿಕವಾಗಿ ಮಾಡಿ, ಬಡಜನರಿಗೂ ಹಳ್ಳಿಯವರಿಗೂ ನಿಮ್ಮ ಅಧಿಕಾರದಲ್ಲಿರುವ ಮಟ್ಟಿಗೆ ಸಹಾಯ ಮಾಡಿ, ಅವರಿಗೆ ಅನ್ಯಾಯವಾಗದಂತೆ ನೋಡಿಕೊಳ್ಳಿ, ಅಂತೂ ನಿಮ್ಮ ಕೈಲಾದಮಟ್ಟಿಗೆ ಪರಕೀಯ ಸರ್ಕಾರದೊಂದಿಗೆ ಅಸಹಕಾರ ತೋರಿಸಿ—ಎಂದು ಗಾಂಧಿಯವರು ಎಂದೋ ಹೇಳಿದ್ದಾರೆ. ನನಗೂ ಹೆಚ್ಚು ವಿಚಾರಗಳು ಇದುವರೆಗೆ ತಿಳಿದಿರಲಿಲ್ಲ. ಇನ್ನೊಂದು ಸಲ ದೇಶದಲ್ಲಿ ಚಳವಳಿ ನಡೆದರೆ ಅದಕ್ಕೆ ಖಂಡಿತ ಹೋಗುವುದೇ ಸಿದ್ಧ. ಈಗ ನನ್ನ ಕೈಲಾದಷ್ಟು ದೇಶಸೇವೆ ಮಾಡುತ್ತೇನೆ. ಆ ಉದ್ದೇಶದಿಂದಲೇ ಕೆಲಸ ಬಿಟ್ಟೆ,

ಈ ಅಂಗಡಿ ಇಟ್ಟೆ. ಖಾದಿ ಹಾಕದ ಬಂಧುಮಿತ್ರರಿಗೆಲ್ಲಾ ಬಲವಂತ ಮಾಡಿ ಖಾದಿ ತೊಡಿಸುತ್ತೇನೆ. ಈಗ ನಿನ್ನ ವಿಚಾರ ಹೇಳು: ಒಂದು ನಾಲ್ಕು ಗಜ ಕೋಟಿನ ಬಟ್ಟೆ, ಮೂರು ಗಜ ಷರಟಿನ ಬಟ್ಟೆ—ಖಾದಿಯದು—ಕೊಡಲೋ ?"

ಕೃಷ್ಣಸ್ವಾಮಿಗೆ ನಗು ಬಂದಿತು; ಗೊಳ್ಳನೆ ನಕ್ಕ.

"ಇದೊಳ್ಳೆ ದೇಶಸೇವೆ ಕಣೋ! ಹೊಟ್ಟೆ ಹೊರೆದುಕೊಳ್ಳುವ ದೇಶಸೇವೆ! ನನ್ನ ತಲೆಗೆ ಒಂದಿಷ್ಟು ಬಟ್ಟೆ ಬಿಗಿದು ಕಳಿಸುವುದಕ್ಕೆ ನನ್ನನ್ನು ಕೂಗಿ ಕರೆದೆಯೋ ?"

"ನಿನ್ನ ತಲೆಗೆ ಬಟ್ಟೆ ಬಿಗಿಯುವುದಿಲ್ಲ, ಟೋಪಿ ಹಾಕುತ್ತೇನೆ" ಎಂದು ಕೃಷ್ಣಸ್ವಾಮಿಯ ತಲೆಯ ಮೇಲಿದ್ದ ಫೆಲ್ಟ್ ಕ್ಯಾಪನ್ನು ಸರ್ರನೆ ತೆಗೆದು ಕೆಳಕ್ಕೆ ಹಾಕಿ ಕಾಲಿನಿಂದ ತುಳಿದು, ಮಾರಾಟಕ್ಕೆ ಇಟ್ಟಿದ್ದ ಖಾದಿಯ ಟೋಪಿಯೊಂದನ್ನು ತೆಗೆದುಕೊಂಡು ಅದನ್ನು ಅವನ ತಲೆಯ ಮೇಲೆ ಹಾಕಿದನು.

ಕೃಷ್ಣಸ್ವಾಮಿಗೆ ಕೋಪ ಬಂದಿತು. ಆದರೆ ಶಾಮಣ್ಣ ಸೋದರ ಮಾವನ ಮಗ, ಹತ್ತಿರದ ನೆಂಟ. ಕೋಪವನ್ನು ನುಂಗಿಕೊಂಡು, ತಲೆಯ ಮೇಲಿದ್ದ ಟೋಪಿಯನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡ.

"ಹೇಗಿದ್ದರೂ ಕೆಲಸ ಬಿಟ್ಟಿದ್ದೀಯೆ; ಹೆದರಿಕೆಯೇನೋ ? ಹಾಕಿಕೊ" ಎಂದು ಶಾಮಣ್ಣ ಹಂಗಿಸುವ ಧ್ವನಿಯಲ್ಲಿ ಹೇಳಿದ.

"ಆ ಕಾಲ ಬಂದಾಗ ಹಾಕಿಕೊಳ್ಳುತ್ತೇನೆ."

"ಈಗ ಕಾಲ ಬಂದಿಲ್ಲವೆ? ಹೇಗೂ ಕೆಲಸ ಬಿಟ್ಟಿದ್ದೀಯೆ. ನಿಮ್ಮ ಮಾವನನ್ನು ಕೇಳಿ ಒಂದು ಸಾವಿರ ರೂಪಾಯಿ ಪಡೆದು ನನ್ನ ಬಂಡವಾಳದ ಜೊತೆಗೆ ಸೇರಿಸು. ಇಬ್ಬರೂ ಕೂಡಿ ಈ ಅಂಗಡಿಯನ್ನು ಅಭಿವೃದ್ಧಿಗೆ ತರೋಣ. ಈಗ ನನ್ನ ಬಂಡವಾಳವೂ ಒಂದು ಸಾವಿರ ರೂಪಾಯೇ. ಲಾಭವನ್ನು ಸಮಸಮವಾಗಿ ಹಂಚಿಕೊಳ್ಳೋಣ. ಸಂದರ್ಭವೊದಗಿದರೆ ನಾನು ಮುಂದೆ ಸತ್ಯಾಗ್ರಹಕ್ಕೆ ಹೋಗಬೇಕಾದೀತು. ನಿನಗೆ ಇಷ್ಟವಿಲ್ಲದಿದ್ದರೆ ನೀನು ಬರಬೇಡ. ನೀನು ಅಂಗಡಿ ನೋಡಿಕೊಂಡಿರು. ದೇಶಸೇವೆ ಮಾಡುವುದಕ್ಕೆ ಒಳ್ಳೆ ಅವಕಾಶ ಸಿಕ್ಕಿದೆ, ಕಳೆದುಕೊಳ್ಳಬೇಡ. ನೋಡು,

ಆಲೋಚನೆಮಾಡು.—ಅದಿರಲಿ, ನೀನು ಕೆಲಸ ಬಿಟ್ಟದ್ದು ಯಾಕೆ?"

"ಏನೋ ನನಗೂ ನಮ್ಮ ಸೆಕ್ಷನ್ ಸೂಪರಿಂಟೆಂಡೆಂಟರಿಗೂ ಬಿಸಿ ಬಿಸಿಯಾಗಿ ಮಾತಾಯಿತು. ಕಾಲುಗಜ ಬರೆದುಕೊಟ್ಟು ಬಂದುಬಿಟ್ಟೆ."

"ಒಳ್ಳೆಯ ಕೆಲಸ ಮಾಡಿದೆ. ಯಾವಾಗಲೂ ನಮ್ಮ ಆತ್ಮಗೌರವ ವನ್ನು ಮಾರಿಕೊಳ್ಳಬಾರದು; ವ್ಯಕ್ತಿಸ್ವಾತಂತ್ರ್ಯವನ್ನು ಕಳೆದುಕೊಳ್ಳ ಕೂಡದು. ಸ್ವರಾಜ್ಯ ಸಂಪಾದನೆ ಎಂದರೂ ಇಷ್ಟೇ ತಾನೆ? ನಷ್ಟ ವಾಗಿರುವ ನಮ್ಮ ಆತ್ಮಗೌರವವನ್ನೂ ವ್ಯಕ್ತಿಸ್ವಾತಂತ್ರ್ಯವನ್ನೂ ಗಳಿಸುವುದು. ನಾನು ಹುಡುಗಾಟಕ್ಕೆ ಹೇಳಲಿಲ್ಲ. ನಾನು ಹೇಳಿದ್ದನ್ನು ದೀರ್ಘವಾಗಿ ಆಲೋಚನೆ ಮಾಡಿ ನನಗೆ ನಿಧಾನವಾಗಿ ಉತ್ತರ ಹೇಳು"

ಇಷ್ಟುಹೊತ್ತಿಗಾಗಲೇ ಶಾಮಣ್ಣನ ಮಾತುಗಳಿಂದ ಕೃಷ್ಣಸ್ವಾಮಿಗೆ ಬೇಸರಹಿಡಿದಿತ್ತು. ಹೊರಡಲು ಸಿದ್ಧನಾಗಿ ಮೇಲಕ್ಕೆದ್ದ.

"ಇದೇನು, ಆಗಲೇ ಹೊರಟುಬಿಟ್ಟೆ? ಮತ್ತೆ ಸಂಜೆಯೋ ನಾಳೆಯೋ ಪುರಸೊತ್ತುಮಾಡಿಕೊಂಡು ಈ ಕಡೆ ಬರುತ್ತೀ ತಾನೆ?"

"ಆಗಲಿ. ಅದಕ್ಕೇನು" ಎಂದು ಕೃಷ್ಣಸ್ವಾಮಿ ಕೈಲಿ ಹಿಡಿದಿದ್ದ ಖಾದಿ ಟೋಪಿಯನ್ನು ಜೇಬಿಗೆ ತುರುಕಿಕೊಂಡ. ಕೆಳಗೆ ತುಳಿದು ಅಜ್ಜಿಬಜ್ಜಿಯಾಗಿ ಬಿದ್ದಿದ್ದ ತನ್ನ ಫೆಲ್ಟ್‌ಕ್ಯಾಪನ್ನು ಖೇದಪೂರ್ಣದೃಷ್ಟಿಯಿಂದ ಒಮ್ಮೆನೋಡಿ ಹೊರಟ. ಅವನು ಹೊರಡುವುದರಲ್ಲಿದ್ದಾಗ ಶಾಮಣ್ಣ ಕೇಳಿದ:

"ಅಂದಹಾಗೆ ಮರೆತೇಹೋಯಿತು. ಬೆಂಗಳೂರಿನಲ್ಲಿ ರುಕ್ಮಿಣಿ ಚಂದ್ರಶೇಖರಯ್ಯ ಇವರನ್ನು ಈಚೆಗೆ ನೋಡಿದ್ದೆಯಾ? ಕ್ಷೇಮವಾಗಿದಾರೆ ತಾನೆ?"

"ಹ್ಞೂ" ಎನ್ನುತ್ತಲೇ ಕೃಷ್ಣಸ್ವಾಮಿ ಮುಂದಕ್ಕೆ ನಡೆದುಹೋದ.

ಮನೆಗೆ ಹಿಂತಿರುಗಿ ಹೋಗುವಾಗ ಒಂದು ಹೊಸ ಫೆಲ್ಟ್‌ಕ್ಯಾಪನ್ನು ಕೊಂಡು, ಅದನ್ನು ಧರಿಸಿದ.

## ೬
## ಕೈಹಿಡಿದ ಹೆಣ್ಣಿನಂತೆ ಕುತ್ತಿಗೆಗೆ ಬಿಗಿದ ಕೆಲಸ

ಕೃಷ್ಣಸ್ವಾಮಿ ರಾಜೀನಾಮೆ ಕೊಟ್ಟಮೇಲೆ, ತನಗೆ ತೋರಿದ ನಾಲ್ಕು ಬುದ್ಧಿಯ ಮಾತುಗಳನ್ನು ಅವನಿಗೆ ಹೇಳಿ ರಾಜೀನಾಮೆಯ ಕಾಗದವನ್ನು ಹಿಂತೆಗೆದುಕೊಳ್ಳುವಂತೆ ಮಾಡಲು ಪ್ರಯತ್ನ ಪಡಬೇಕೆಂಬ ಉದ್ದೇಶದಿಂದ ಚಂದ್ರಶೇಖರಯ್ಯನೇ ಕೃಷ್ಣಸ್ವಾಮಿಯನ್ನು ಹುಡುಕಿಕೊಂಡು ಅವನ ಮನೆಗೆ ಬಂದಿದ್ದನು. ಮನೆಗೆ ಬೀಗ ಹಾಕಿತ್ತು. ಗಂಡಹೆಂಡಿರಿಬ್ಬರೂ ಮೈಸೂರಿಗೆ ಹೋಗಿರುವುದಾಗಿ ನೆರೆಯವರಿಂದ ತಿಳಿಯಬಂದಿತು. ಆದ್ದರಿಂದ, ರಾಜೀನಾಮೆಯ ಕಾಗದವನ್ನು ಹಿಂತೆಗೆದುಕೊಳ್ಳಬೇಕೆಂದು ಸಲಹೆಮಾಡಿ ಚಂದ್ರಶೇಖರಯ್ಯ ಕೃಷ್ಣಸ್ವಾಮಿಗೆ ಪತ್ರ ಬರೆದನು. ಚಂದ್ರಶೇಖರಯ್ಯನಿಗೆ ನಾರಾಯಣಮೂರ್ತಿಗಳ ವಿಳಾಸ ಗೊತ್ತಿತ್ತು.

ಕೃಷ್ಣಸ್ವಾಮಿ ಚಂದ್ರಶೇಖರಯ್ಯನ ಪತ್ರವನ್ನು ಜೇಬಿನಲ್ಲೇ ಇಟ್ಟು ಕೊಂಡು ದಿನದಿನವೂ ಮಾಡುವುದಕ್ಕೆ ಕೆಲಸವಿಲ್ಲದೆ ಅಲೆದಾಡುತ್ತಿದ್ದ. ಅವನು ಮಾವನ ಮನೆಗೆ ಬಂದು ಆಗಲೇ ಒಂದು ವಾರವಾಗಿತ್ತು. ಚಂದ್ರಶೇಖ ರಯ್ಯನಿಂದ ಪತ್ರ ಬಂದ ಸಂಗತಿಯನ್ನು ಅವನು ಭಾಗ್ಯಲಕ್ಷ್ಮಿಗೂ ತಿಳಿಸಿರ ಲಿಲ್ಲ. ಯಾರ ಸಲಹೆಯನ್ನೂ ಕೋರದೆ, ರಾಜೀನಾಮೆಯನ್ನು ಹಿಂತೆಗೆದು ಕೊಳ್ಳಲು ತನಗೆ ಇಷ್ಟವಿಲ್ಲವೆಂದು ಚಂದ್ರಶೇಖರಯ್ಯನಿಗೆ ಉತ್ತರ ಬರೆದು ಹಾಕಿದ. ಈ ವಿಚಾರವನ್ನು ಚಂದ್ರಶೇಖರಯ್ಯ ತನ್ನ ಹೆಂಡತಿ ರುಕ್ಮಿಣಿಗೆ ತಿಳಿಸಿದಾಗ, ಅವಳು "ನೀವು ಮಾಡುವ ಕೆಲಸ ನೀವು ಮಾಡಿದಿರಿ ಹೋಗಲಿ ಬಿಡಿ. ಅವನಿಗೇನು, ಬೇಕಾದಷ್ಟು ಮಾವನ ಆಸ್ತಿ ಇದೆ. ಅದನ್ನು ಕರಗಿಸುತ್ತಾನೆ. ಅದಕ್ಕೇ ಆ ಅಹಂಕಾರ" ಎಂದಳು.

ರಾಜೀನಾಮೆಯನ್ನು ಕೊಟ್ಟದ್ದಂತೂ ಆಯಿತು; ಆ ವಿಚಾರದಲ್ಲಿ ಪುನರಾಲೋಚನೆ ಮಾಡಬೇಕೆಂದು ಚಂದ್ರಶೇಖರಯ್ಯನಿಂದ ಸಲಹೆ ಬಂದಾಗ, ತಾನು ಇಟ್ಟ ಹೆಜ್ಜೆಯನ್ನು ಸಮರ್ಥಿಸಿಕೊಂಡಾಯಿತು; ಇನ್ನು ಉಳಿದ ಕೆಲಸವೆಂದರೆ, ಈ ವಿಚಾರವನ್ನು ತನ್ನ ಮಾವನವರಿಗೆ ತಿಳಿಸುವುದು. ಒಂದು ದಿನ (ಅಂದು ಭಾನುವಾರ) ಮಧ್ಯಾಹ್ನ ಊಟವಾದಮೇಲೆ ಮಾವ

ಅಳಿಯ ಇಬ್ಬರೂ ಜಗಲಿಯಮೇಲೆ ತಾಂಬೂಲ ಹಾಕಿಕೊಳ್ಳುತ್ತ ಕುಳಿತಿದ್ದಾಗ, ಮಾವನವರೇ ಎತ್ತಿದ ಒಂದು ಮಾತಿನಿಂದ ವಿಚಾರವನ್ನು ಅವರ ಮುಂದೆ ಇಡಲು ಕೃಷ್ಣಸ್ವಾಮಿಗೆ ಸದವಕಾಶ ದೊರೆಯಿತು.

"ಇನ್ನೂ ಎಷ್ಟು ದಿವಸ ಇದೆ ರಜ? ಹಕ್ಕಿನ ರಜಾ ತೆಗೆದುಕೊಂಡು ಬಂದಿದ್ದೀಯೋ?" ಎಂದು ನಾರಾಯಣಮೂರ್ತಿಗಳು ಸಹಜವಾದ ರೀತಿಯಲ್ಲಿಯೇ ಪ್ರಶ್ನಿಸಿದರು.

"ಇಲ್ಲ, ರಜ ತೆಗೆದುಕೊಂಡಿಲ್ಲ" ಎಂದ ಕೃಷ್ಣಸ್ವಾಮಿ.

"ರಜ ತೆಗೆದುಕೊಂಡಿಲ್ಲ! ಹಾಗೆಂದರೇನು ಕೃಷ್ಣಸ್ವಾಮಿ?"

"ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಟ್ಟೆ"–ನಿರ್ವಿಕಾರವಾಗಿ ನುಡಿದ ಕೃಷ್ಣಸ್ವಾಮಿ.

ನಾರಾಯಣಮೂರ್ತಿಗಳಿಗೆ ಕಟ್ಟಚ್ಚರಿಯೇ ಆಯಿತು. ಕೃಷ್ಣಸ್ವಾಮಿಯ ಬಾಯಿಂದಲೇ ಅಲ್ಲದೆ ಇನ್ನು ಯಾರಿಂದಲಾದರೂ ಆ ಮಾತನ್ನು ಕೇಳಿದ್ದಿದ್ದರೆ ಅದನ್ನವರು ಖಂಡಿತ ನಂಬುತ್ತಿರಲಿಲ್ಲ. ಅವನ ಮಾತು ನಿಜವಲ್ಲದ ಭಾಗದಲ್ಲಿ, ಅವನು ತಮ್ಮೊಡನೆ ಹುಡುಗಾಟವಾಡುತ್ತಿರಬೇಕು, ಇಲ್ಲವೆ ಅವನಿಗೆ ಬುದ್ಧಿಭ್ರಮಣೆಯಾಗಿರಬೇಕು. ಕೃಷ್ಣಸ್ವಾಮಿ ಎಂದೂ ತಮ್ಮೊಡನೆ ಹುಡುಗಾಟವಾಡುವುದಿರಲಿ, ಹೆಚ್ಚು ಮಾತುಕತೆಯನ್ನೇ ಆಡಿದವನಲ್ಲ. ಬುದ್ಧಿಭ್ರಮಣೆಯೆನ್ನಲು ಅವನ ನಡವಳಿಕೆಯಲ್ಲಿ ಯಾವ ವೈಪರೀತ್ಯವೂ ಈವರೆಗೆ ಕಂಡುಬಂದಿರಲಿಲ್ಲ. ಅವರಿಗೆ ದಿಕ್ಕುತೋಚದಾಯಿತು. "ಇದೇನು ಗ್ರಹಚಾರ!" ಎಂದುಕೊಂಡರು. ಎಷ್ಟಾದರೂ ಅಳಿಯ; ಸಮಾಧಾನಚಿತ್ತರಾಗಿಯೇ ಕೇಳಿದರು:

"ಅಂಥಾದ್ದೇನಪ್ಪ ಕಾರಣ? ಕೆಲಸದಲ್ಲಿ ಜುಗುಪ್ಸೆ ಹುಟ್ಟಿತೆ? ಇಲ್ಲ, ಮೇಲ್ಪಟ್ಟ ಅಧಿಕಾರಿಗಳು ಅನ್ಯಾಯ ಮಾಡಿದರೆ, ಅಪಮಾನ ಮಾಡಿದರೆ?"

ಚಂದ್ರಶೇಖರಯ್ಯನೂ ಕೃಷ್ಣಸ್ವಾಮಿಯೂ ಒಂದೇ ಕಚೇರಿಯಲ್ಲಿ ಕೆಲಸ ಮಾಡುತ್ತಿರುವರು ಎಂಬಿಷ್ಟು ಸಂಗತಿ ನಾರಾಯಣಮೂರ್ತಿಗಳಿಗೆ ತಿಳಿದಿದ್ದಿತೆ ಹೊರತು, ಅವನ ಕೈಕೆಳಗೆ ಇವನು ಕೆಲಸಮಾಡುತ್ತಿದ್ದನೆಂಬ ಸಂಗತಿ ಅವರಿಗೆ ತಿಳಿದಿರಲಿಲ್ಲ. ಯಾವ ಕಾರಣವನ್ನು ಕೊಡಲಿ ಎಂದು ಎರಡು ಕ್ಷಣ ಕೃಷ್ಣಸ್ವಾಮಿ ಆಲೋಚನೆ ಮಾಡಿದ. ಹೇಗಿದ್ದರೂ ಎರಡು ಸರಿಯಾದ

ಕಾರಣಗಳನ್ನು ಅವರೇ ಸೂಚಿಸಿದ್ದರು. ಎರಡನೆಯ ಕಾರಣವನ್ನು ಕೊಟ್ಟರೆ ಆ ಮೇಲ್ಪಟ್ಟ ಅಧಿಕಾರಿಗಳು ಯಾರು ಎಂದು ಪ್ರಶ್ನಿಸುತ್ತಾರೆ, ಬೆಂಗಳೂರಿಗೆ ಬಂದು ಆ ಅಧಿಕಾರಿಗಳನ್ನು ಕಂಡು ಮಾತನಾಡಿ, ಎಲ್ಲವನ್ನೂ ಸರಿಪಡಿಸುತ್ತೇನೆ ಎಂದು ಹೇಳಿದರೂ ಹೇಳಬಹುದು. ಆದ್ದರಿಂದ, ಹೆಚ್ಚಿನ ಪ್ರಶ್ನೆ, ಮುಂದಿನ ತನಿಖೆ, ಸಂಧಾನ ಪ್ರಯತ್ನ–ಇವು ಯಾವುದಕ್ಕೂ ಅವಕಾಶವಾಗದಂತೆ ಮೊದಲನೆಯ ಕಾರಣವನ್ನೇ ಕೊಡುವುದು ಸರಿಯೆಂದು ತರ್ಕಮಾಡಿ, ಕೃಷ್ಣಸ್ವಾಮಿ ಹಾಗೆಯೇ ಹೇಳಿಬಿಟ್ಟನು.

ಕೆಲಸದಲ್ಲಿ ಜುಗುಪ್ಸೆ! ಉದ್ಯೋಗಸ್ಥ ಕೆಲಸದಲ್ಲಿ ಜುಗುಪ್ಸೆಪಟ್ಟರೆ ಹೇಗೆ? ಕೆಲಸಕ್ಕೆ ಸೇರುವುದೂ ಒಂದು ಲಾಟರಿ ಇದ್ದಹಾಗೆ. ಎಲ್ಲರಿಗೂ ಎಲ್ಲಾ ವೇಳೆಗಳಲ್ಲಿಯೂ ತಾವು ಇಷ್ಟಪಡುವ ಕೆಲಸವೇ ಹೇಗೆ ದೊರಕೀತು? ಮೇಷ್ಟ್ರಾಗಬಯಸಿದವನು ಮೇಸ್ತ್ರಿಯಾಗಬೇಕಾದೀತು; ಕಂಟ್ರಾಕ್ಟರ್ ಆಗಬೇಕೆನ್ನುವವನು ಕಾರಕೂನನಾಗಬಹುದು; ಇಟ್ಟಿಗೆ ಹೊತ್ತವನು ಇಂಜನೀಯರೂ ಆದಾನು. ಕೈಹಿಡಿದ ಹೆಣ್ಣಿನಂತೆ ಕುತ್ತಿಗೆಗೆ ಬಿಗಿದ ಕೆಲಸ. ತಮ್ಮ ಶಿರಸ್ತೇದಾರಿಕೆಯಲ್ಲಿ ತಾನೇ ಉಲ್ಲಾಸಕರವಾದ ಅಂಶವೇನಿದೆ? ಆದರೆ, ಅದನ್ನು ಕರ್ತವ್ಯದೃಷ್ಟಿಯಿಂದ ತಾವು ನಿರ್ವಹಿಸುತ್ತಿರುವುದರಿಂದ ತಮಗೆ ಅದರಲ್ಲಿ ಜುಗುಪ್ಸೆ ಜಂಜಡಗಳು ತೋರಿಬಂದಿಲ್ಲ. ಹೀಗಿರುವಾಗ, ಕೆಲಸಕ್ಕೆ ಸೇರಿ ಇನ್ನೂ ಕೇವಲ ಐದಾರು ವರ್ಷಗಳಾಗಿರುವಾಗ ಕೃಷ್ಣಸ್ವಾಮಿಗೆ ಜುಗುಪ್ಸೆಯೆಂದರೇನು? ಜುಗುಪ್ಸೆ ಎನ್ನುವ ಮಾತಿನಲ್ಲಿ ಅವರಿಗೆ ನಂಬಿಕೆ ಹುಟ್ಟಲಿಲ್ಲ.

"ಜುಗುಪ್ಸೆ ಎಂದರೆ ಹೇಗಪ್ಪ? ಅಥವಾ ಬೇರೆ ಇನ್ನೇನಾದರೂ ಕಾರಣದಿಂದ ರಾಜೀನಾಮೆ ಕೊಡಬೇಕಾಗಿ ಬಂದಿದ್ದಲ್ಲಿ ತಿಳಿಸು. ನಾನೇ ಒಂದು ಹೆಜ್ಜೆ ಬೆಂಗಳೂರಿಗೆ ಬಂದು ನಿನ್ನ ರಾಜೀನಾಮೆಯನ್ನು ದಾಖಲೆ ಮಾಡಿಕೊಳ್ಳದ ಹಾಗೆ ಮಾಡುತ್ತೇನೆ. ಚಂದ್ರಶೇಖರಯ್ಯನೂ ಒಳ್ಳೆ ಪ್ರಭಾವಶಾಲಿಯಾಗಿದ್ದಾನೆ ಅಂತ ಕೇಳಿದೇನೆ. ಅವನಿಂದಲೂ ಬೇಕಾದರೆ ಒಂದು ಮಾತು ಹೇಳಿಸೋಣ."

ಚಂದ್ರಶೇಖರಯ್ಯನ ಕೀರ್ತಿ ತನ್ನ ಮಾವನವರವರೆಗೂ ಹಬ್ಬಿದೆಯೆ! ಇದನ್ನು ಸಹಿಸಲಾಗಲಿಲ್ಲ ಕೃಷ್ಣಸ್ವಾಮಿಗೆ.

"ತಾವು ಅಷ್ಟು ತೊಂದರೆ ತೆಗೆದುಕೊಳ್ಳಬೇಕಾದ್ದಿಲ್ಲ. ನನ್ನ ರಾಜೀನಾಮೆ ಅಂಗೀಕಾರವಾಗಿದೆಯೆಂದು ಚಂದ್ರಶೇಖರಯ್ಯ ಕಾಗದ ಬರೆದಿದ್ದಾನೆ."

ಈ ಮಾತನ್ನು ನಾರಾಯಣಮೂರ್ತಿಗಳು ಸಂಪೂರ್ಣವಾಗಿ ನಂಬಿದರು; "ಹಾಗಾದರೆ ಮುಂದೆ ಏನು ಮಾಡಬೇಕು ಅಂತಿದ್ದೀಯೆ?" ಎಂದು ಕುತೂಹಲರಾಗಿ ಕೇಳಿದರು.

ಕೃಷ್ಣಸ್ವಾಮಿಗೆ ಬೇಕಾಗಿದ್ದುದು ಇದೇ ಪ್ರಶ್ನೆ. "ಬೇರೆ ಯಾವುದಾದರೂ ಕೆಲಸಕ್ಕೆ ಸೇರಬಹುದು. ಆದರೆ, ಯಾವ ಕೆಲಸಕ್ಕೆ ಸೇರಿದರೇನು? ರಿಟೈರಾಗುವ ಹೊತ್ತಿಗೆ ಅಬ್ಬಬ್ಬ ಎಂದರೆ ನೂರು ಮುಟ್ಟುವ ಹೊತ್ತಿಗೆ ಸಾಕಾಗಿಹೋಗುತ್ತದೆ."

"ಹಾಗೆಂದರೇನು ಕೃಷ್ಣಸ್ವಾಮಿ? ನನ್ನ ವಿಷಯಾನೇ ತೆಗೆದುಕೋ. ನಾನು ಇಷ್ಟಪಟ್ಟಿದ್ದರೆ ಈ ಹೊತ್ತಿಗೆ ಅಮಲ್ದಾರನಾಗಬಹುದಾಗಿತ್ತು. ಊರೂರು ಅಲೆಯುವುದು ಬೇಡ ಅಂತ ನಾನೇ ಬೇಡ ಅಂದೆ. ನೀನು ಬಿ. ಎ. ಮಾಡಿದ್ದೀಯೆ. ನೀನು ಇದ್ದ ಕೆಲಸದಲ್ಲಿಯೇ ಇದ್ದಿದ್ದರೂ ರಿಟೈರಾಗುವ ಹೊತ್ತಿಗೆ ಇನ್ನೇನಿಲ್ಲ ಎಂದರೂ ಯಾವುದಾದರೂ ಇಲಾಖೆಯ ಸೂಪರಿಂಟೆಂಡೆಂಟರಾಗಿ ಇನ್ನೂರು ರೂಪಾಯಿಯಾದರೂ ಪಡೆಯಬಹುದಾಗಿತ್ತು. ('ಅವಿವೇಕದ ಕೆಲಸ ಮಾಡಿದೆ' ಎಂಬ ಮಾತು ಅಳಿಯನ ಗೌರವಕ್ಕೆ ಹಿಮ್ಮೆಟ್ಟಿ ಗಂಟಲಲ್ಲಿಯೇ ಉಳಿಯಿತು.) ಹೋಗಲಿ, ಮುಂದೇನು ಮಾಡಬೇಕೆಂದಿದ್ದೀಯೆ?"

"ಬೊಂಬಾಯಿನಲ್ಲೋ ಮದರಾಸಿನಲ್ಲೋ ಲಾ ಪರೀಕ್ಷೆಗೆ ಓದಿ, ಅಡ್ವೋಕೇಟಾಗಿ ಸ್ವತಂತ್ರನಾಗಿರೋಣ ಅಂತ ಮಾಡಿಕೊಂಡಿದೇನೆ."

"ಒಳ್ಳೆಯ ಆಲೋಚನೆಯೇ. ಬಾಧಕವೇನಿಲ್ಲ. ಬಿ. ಎ. ಆದ ಕೂಡಲೆ ನೀನು ಲಾಗೆ ಓದಬೇಕು ಅಂದಿದ್ದರೆ ನಾನು ಬೇಡ ಅನ್ನುತ್ತಿದ್ದೆನೆ? ಕಾಲ ಮೀರಿಹೋಯಿತಲ್ಲಪ್ಪಾ."

"ಎಷ್ಟೋ ಜನ ನಲವತ್ತು ವರ್ಷದ ಮೇಲೆ ಟೆಸ್ಟುಗಳನ್ನು ಪ್ಯಾಸು ಮಾಡಿ ಪ್ಲೀಡರಾಗಿಲ್ಲವೆ? ನನಗಿನ್ನೂ ಮೂವತ್ತು ಕೂಡ ಇಲ್ಲ. ಮನಸ್ಸು ಮಾಡಿದರೆ ಅಸಾಧ್ಯ ಯಾವುದು?"

"ಹಾಗಾದರೆ ಹೀಗೆಂದೇ ನಿರ್ಧರ ಮಾಡಿಬಿಟ್ಟಿದ್ದೀಯೋ?"

"ಹೌದು."

"ಎಷ್ಟು ವರ್ಷ ಓದಬೇಕು?"

"ಎರಡು ವರ್ಷ."

"ತಿಂಗಳು ತಿಂಗಳಿಗೆ ಏನು ಬೇಕಾಗಬಹುದು?"

"ತಿಂಗಳಿಗೆ ಊಟ ವಸತಿ ಫೀಜು ಉಡಿಗೆ ತೊಡಿಗೆ ಎಲ್ಲ ಸೇರಿ ನೂರು ನೂರಿಪ್ಪತ್ತು ರೂಪಾಯಿ ಬೇಕಾಗಬಹುದು."

ಇದು ಬಹು ಹೆಚ್ಚೆಂದು ನಾರಾಯಣಮೂರ್ತಿಗಳಿಗೆ ತೋರದೆ ಇರಲಿಲ್ಲ.

"ಅಷ್ಟು ಬೇಕಾಗುತ್ತದೆಯೆ!" ಎಂದು ತಮ್ಮ ಸಂದೇಹವನ್ನು ಆಶ್ಚರ್ಯಸೂಚನೆಯಲ್ಲಿ ವ್ಯಕ್ತಪಡಿಸಿದರು.

"ನೆಮ್ಮದಿಯಾಗಿ ಓದಬೇಕಾದರೆ ಇನ್ನೂ ಹತ್ತಿಪ್ಪತ್ತು ಹೆಚ್ಚಾಗಿಯೇ ಬೇಕಾದೀತು."

"ಅದು ಸರಿ. ಹಣದ ಏರ್ಪಾಡು ಏನು ಮಾಡಿಕೊಂಡಿದ್ದೀಯೆ ಎಂದು ನಿನ್ನನ್ನ ಕೇಳಿದರೆ ಏನು ಮಾಡುತ್ತೀಯೆ, ಪಾಪ. ನನ್ನ ಕೈಲಾದದ್ದು ನಾನು ಮಾಡುತೇನೆ. ಕೆಲಸ ಬಿಟ್ಟಿದ್ದಂತೂ ಆಯಿತು. ನೀನು ಲಾಯ ರಾದರೆ ನನಗೂ ಸಂತೋಷವೇ. ಕಾಲೇಜಿಗೆ ಸೇರುವಾಗ ಎಷ್ಟು ಬೇಕಾಗ ಬಹುದು?"

"ಕೈಯಲ್ಲಿ ಒಂದು ಐನೂರು ರೂಪಾಯಿ ಇದ್ದರೆ ಮೇಲು."

ನಾರಾಯಣಮೂರ್ತಿಗಳು ಮನಸ್ಸಿನಲ್ಲಿಯೆ 'ಅಬ್ಬಬ್ಬ!' ಎಂದು ಕೊಂಡು, ಕೇಳಿದರು:

"ಬೊಂಬಾಯಿಗೆ ಹೋಗುತ್ತೀಯೋ ಮದರಾಸಿಗೋ?"

"ಇನ್ನೂ ತೀರ್ಮಾನ ಮಾಡಿಲ್ಲ."

"ಮದರಾಸೇ ಮೇಲೆಂದು ತೋರುತ್ತೆ. ಬೊಂಬಾಯಿಗಿಂತ ಹತ್ತಿರ. ಕಾಲೇಜಿಗೆ ಸೇರುವುದಕ್ಕೆ ಕಾಲ ಮೀರಿಲ್ಲವೆ?"

"ಇಲ್ಲ. ಈಗ ಸಕಾಲವಾಗಿದೆ."

"ಸೀಟಿಗೆ ಅರ್ಜಿ ಹಾಕಿಕೊಳ್ಳಬೇಡವೋ?"

"ಅದೇನು ಪರವಾಯಿಲ್ಲ. ಅವನ್ನೆಲ್ಲಾ ಅಲ್ಲಿಗೆ ಹೋದಮೇಲೆ ಏರ್ಪಾಡುಮಾಡಿಕೊಳ್ಳಬಹುದು."

"ಒಳ್ಳೆಯದಪ್ಪ. ನೀನು ಹೊರಡುವ ದಿನವನ್ನು ನಿಷ್ಕರ್ಷೆ ಮಾಡಿ ಹೇಳು. ಹೊರಡುವಾಗ ಹಣವನ್ನು ಜೊತೆಮಾಡಿ ಕೊಡುತ್ತೇನೆ."

"ಆಗಬಹುದು."

ತನ್ನ ಮಾವನವರು ಹೆಚ್ಚು ಬೆದಕಿ ಕೇಳದೆ ತನ್ನ ಕಾರ್ಯಕ್ರಮಕ್ಕೆ ಒಪ್ಪಿಗೆ ಕೊಟ್ಟದ್ದು ಕೃಷ್ಣಸ್ವಾಮಿಗೆ ಸಂತೋಷವನ್ನುಂಟುಮಾಡಿತು.

## ೭

## ಕೋರಿಕೆಯ ಕುಸುಮದ ಹಿಂದೆ ಶಂಕೆಯ ಮುಳ್ಳು

ಕೃಷ್ಣಸ್ವಾಮಿ ಕೆಲಸ ಬಿಟ್ಟ ಸಂಗತಿಯನ್ನು ತಿಳಿದು ಮನೆಯವರಿಗೆಲ್ಲ ಮೊದಲು ಆಶ್ಚರ್ಯವಾಯಿತು; ವ್ಯಥೆಯಾಯಿತು. ಆದರೆ, ಅವನು ನ್ಯಾಯಶಾಸ್ತ್ರವನ್ನು ಓದಿ ನ್ಯಾಯವಾದಿಯಾಗಬೇಕೆಂದಿರುವ ಅವನ ಉದ್ದೇಶವನ್ನು ಕೇಳಿ ತಿಳಿದಮೇಲೆ ಅವರಿಗೆಲ್ಲ ಸಮಾಧಾನವಾಯಿತು.

"ಭಾಗ್ಯಲಕ್ಷ್ಮಿಯ ಅದೃಷ್ಟ ಹೇಗಿದೆಯೋ ಕಂಡಿರುವರಾರಮ್ಮ? ಕೃಷ್ಣ ಸ್ವಾಮಿ ವಕೀಲನಾಗಿ, ದೇವರ ದಯ ಇದ್ದರೆ ಮುಂದೆ ಮುನ್ಸೀಫನಾಗ ಬಹುದು; ಜಡ್ಜಿಯಾದರೂ ಆಗಬಹುದು" ಎಂದರು ಗೌರಮ್ಮನವರು.

"ದೇವರ ದಯದಿಂದ ಹಾಗೆ ಆಗಲಿ" ಎಂದು ಶುಭವನ್ನೆ ಕೋರಿದರು ಜಯಲಕ್ಷ್ಮಮ್ಮನವರು.

ಆದರೆ ಭಾಗ್ಯಲಕ್ಷ್ಮಿಯ ಮನಸ್ಸಿನಲ್ಲಿ ಮಾತ್ರ ಅದೇನೋ ಅಳುಕು, ಅಶುಭಶಂಕೆ; ಅತಿಶಯ ಸ್ನೇಹದ ಸ್ವಭಾವವೇ ಹಾಗೆ. ತನ್ನ ಯಜಮಾನರು ಇದ್ದದ್ದರಲ್ಲಿ ತೃಪ್ತಿಪಟ್ಟುಕೊಳ್ಳದೆ ಇಲ್ಲದ್ದಕ್ಕೆ ಏಕೆ ಕೈಚಾಚುತ್ತಾರೆಯೋ ಎಂಬ ಅಸಮಾಧಾನ. ಅವರು ಬಿ. ಎ. ಮಾಡಿದ ಕೂಡಲೆ ಈ ಪ್ರಯತ್ನವನ್ನು ಮಾಡಿ, ತಾನು ತವರುಮನೆಯಲ್ಲೇ ಇರಬೇಕಾಗಿ ಬಂದಿದ್ದರೆ ಅದು ಒಂದು ರೀತಿ. ಈಗ, ಕೆಲವು ತಿಂಗಳು ಮಾತ್ರ ಸಂಸಾರ ಮಾಡಿ, ಎರಡು

ವರ್ಷಕಾಲ ಗಂಡನನ್ನು ಅಗಲಿರುವುದು ಅವಳಿಗೆ ಸರಿಯಾಗಿ ಕಾಣಲಿಲ್ಲ. ಎಲ್ಲ ಹೆಣ್ಣು ಮಕ್ಕಳಿಗೂ ಇರುವಂತೆ ಬೇಗನೆ ಚೊಚ್ಚಲು ಮಗುವಿನ ತಾಯಾಗಬೇಕೆಂಬ ಬಯಕೆ. ಅದು ಕೈಗೂಡುವುದೆಂದಿಗೋ. ತನ್ನ ಯಾಜಮಾನರು ಭಾರಿ ವಕೀಲರೆನ್ನಿಸಿ, ಬೇಕಾದಷ್ಟು ಹಣ ಸಂಪಾದಿಸುತ್ತಾ, ಕಾರಿನಲ್ಲಿ ಓಡಾಡುತ್ತಾ, ತಾನು ಅಂತಹ ವಕೀಲರ ಹೆಂಡತಿಯಾಗಿರುವ ಕೈಗೂಡದ ಕನಸಿಗಿಂತ ಒಂದು ಪುಟ್ಟಮನೆಯನ್ನು ಮಾಡಿಕೊಂಡು, ಮಕ್ಕಳನ್ನು ಮುದ್ದಾಡಿ ನಲಿಯುತ್ತಾ, ನೆಮ್ಮದಿಯಾದ ಸರಳ ಜೀವನವನ್ನು ನಡಸುವ ನಿಶ್ಚಿತವಾದ ನನಸೇ ಅವಳಿಗೆ ಹೆಚ್ಚು ಪ್ರಿಯವಾಗಿ ಕಂಡಿತು. ಆದರೆ ಅವಳು ಈಗ ಏನೂ ಮಾಡುವಂತಿರಲಿಲ್ಲ. ತನ್ನ ಯಜಮಾನರ ಬಯಕೆಗೆ ತನ್ನ ತಂದೆಯೇ ಬೆಂಬಲ ಕೊಟ್ಟಿದ್ದರು. ಅದರಿಂದ ಯಜಮಾನರಿಗೆ ಒಳ್ಳೆಯದಾಗಲಿ ಎಂದು ಕೋರುವುದೇ ತನ್ನ ಕರ್ತವ್ಯವೆಂದು ಭಾವಿಸಿ ಅವಳೂ ಹಾಗೆಯೇ ಕೋರಿದಳು. ಆದರೂ ಅವಳ ಕೋರಿಕೆಯ ಕುಸುಮದ ಹಿಂದೆ ಶಂಕೆಯ ಮುಳ್ಳು ಅವಳ ಮನಸ್ಸನ್ನು ಚುಚ್ಚುತ್ತಿದ್ದಿತು.

ನಾರಾಯಣಮೂರ್ತಿಗಳೇನೋ ಅವರಿಗೆ ಸಹಜವಾದ ಧಾರಾಳ ಮನಸ್ಸಿನಿಂದ ತಮ್ಮ ಅಳಿಯನಿಗೆ ನೆರವು ನೀಡುವ ನಿಶ್ಚಯ ಮಾಡಿದ್ದರು. ಅವರು ಈವರೆಗೆ ಯಾರು ಯಾರಿಗೂ ಬೇಕಾದಷ್ಟು ಸಹಾಯ ಮಾಡಿದ್ದರು. ಕೆಲವು ವರ್ಷಗಳ ಹಿಂದೆ ಅನಾಥಾಲಯಕ್ಕೆ ತಾವು ಬಹಳ ಹಿಂದೆ ದಾನ ಮಾಡಿದ್ದ ಐನೂರರ ಜೊತೆಗೆ ಇನ್ನು ಐನೂರು ರೂಪಾಯಿಗಳನ್ನು ದಾನ ಮಾಡಿದ್ದರು. ಅವರು ಎಂದಿನಿಂದಲೂ ಪರೋಪಕಾರನಿರತರಾಗಿದ್ದರೂ 'ಮನೆಗೆ ಮಾರಿ ಪರರಿಗೆ ಉಪಕಾರಿ' ಎನ್ನಿಸಿಕೊಳ್ಳುವ ಅವಿವೇಕಿಗಳ ಗುಂಪಿಗೆ ಸೇರಿದವರಲ್ಲ. ಅವರು ಸ್ವಾರ್ಥಿಗಳಲ್ಲದಿದ್ದರೂ ಪರಹಿತಕ್ಕೋಸ್ಕರ ಸ್ವಹಿತವನ್ನು ಬಲಿಕೊಡುವ ಸ್ವಭಾವದವರಲ್ಲ. ಸ್ವಹಿತ ಪರಹಿತಗಳೆರಡನ್ನೂ ಸಾಧಿಸುವ ಸಮನ್ವಯ ಮಾರ್ಗವೇ ಅವರ ಬಾಳ ಗುರಿ. ತಮ್ಮ ಅಲ್ಪ ಸಾಮರ್ಥ್ಯವಿದ್ದಮಟ್ಟಿಗೆ ಆ ಗುರಿಯತ್ತ ಸಾಗುತ್ತಿದ್ದರು. ಈಗ ಅವರು ತಮ್ಮ ಇಬ್ಬರು ಗಂಡು ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಿ ಅವರನ್ನು ಒಂದು ನೆಲೆಗೆ ನಿಲ್ಲಿಸಬೇಕಾಗಿದ್ದಿತು. ತಮ್ಮ ಕರ್ತವ್ಯವನ್ನು ಅವರು ಮರೆತಿರಲಿಲ್ಲ. ಆದರೆ ಈಗ ನೆಲೆಯಲ್ಲಿ ನಿಂತಿದ್ದ ಅಳಿಯನು ನೆಲೆಯನ್ನು ಬಿಟ್ಟು ನೆಲೆ

ತಪ್ಪಿದವನಾದನು. ತಮ್ಮ ಪ್ರೀತಿಯ ಮಗಳು ಮುಂದೆ ನೆಮ್ಮದಿಯಿಂದಿರ ಬೇಕಾದರೆ ಅಳಿಯನ ಅಪೇಕ್ಷೆಯಿಂತೆ ಅವನನ್ನು ಮತ್ತೆ ನೆಲೆಗಾಣಿಸ ಬೇಕಾದದ್ದು ತಮ್ಮ ಕರ್ತವ್ಯವೆಂದು ಭಾವಿಸಿದರು. ಅವರು ಹೇಗೂ ತಮ್ಮ ಮಗಳಿಗೆ ಒಂದು ಮನೆಯನ್ನೂ ಗದ್ದೆಯನ್ನೂ ತೆಗೆದುಕೊಡಬೇಕೆಂದು ಉದ್ದೇಶಪಟ್ಟಿದ್ದರಷ್ಟೆ. ಅಳಿಯನೂ ಈ ಉದ್ದೇಶವನ್ನು ತಿಳಿದವನಾಗಿ, ತನ್ನ ಹೆಂಡತಿಗೆ ಬರಬಹುದಾದ ಬಳುವಳಿಯಲ್ಲಿ ಒಂದು ಭಾಗವನ್ನು ಈಗ ಧನಸಹಾಯರೂಪವಲ್ಲಿ ಬಯಸುತ್ತಿರುವನೆಂದು ಬಗೆದರು. ಮಗಳಿಗೆ ಕೊಟ್ಟರೇನು ಅಳಿಯನಿಗೆ ಕೊಟ್ಟರೇನು? ಅಳಿಯನ ಪುರೋಭಿವೃದ್ಧಿಯಾದರೆ ಮಗಳ ಸುಖವನ್ನು ಸಾಧಿಸಿದಂತೆಯೇ ಅಲ್ಲವೆ? ಈಗ ಅಳಿಯನಿಗೋಸ್ಕರ ಮೂರು ನಾಲ್ಕು ಸಾವಿರ ರೂಪಾಯಿಗಳನ್ನು ವ್ಯಯ ಮಾಡುವುದು ಒಂದು ದೃಷ್ಟಿಯಲ್ಲಿ ವ್ಯಯವೇ ಅಲ್ಲ. ವಿದ್ಯೆಗೆ ಹಾಕಿದ ಹಣ ವರ್ಧಿಸುವುದರಲ್ಲಿ ಸಂಶಯವಿಲ್ಲ. ಹೀಗೆ ಸದ್ಭಾವನೆಯಿಂದ ಕೂಡಿದವರಾಗಿ ಅವರು ತಮ್ಮ ಅಳಿಯನು ಅಪೇಕ್ಷಿಸಿದ ಸಹಾಯವನ್ನು ನೀಡಲು ಸ್ವಲ್ಪವೂ ಹಿಂದೆಮುಂದೆ ನೋಡದೆ ನಿಶ್ಚಯ ಮಾಡಿಬಿಟ್ಟರು. ಹೀಗೆ ನಿಶ್ಚಯ ಮಾಡಿದ್ದರೂ, ಅವರು ತಮ್ಮ ಹೆಂಡತಿಯನ್ನು ಕೇಳದೆ ಇರಲಿಲ್ಲ. ಕೃಷ್ಣಸ್ವಾಮಿ ಸಹಾಯ ಬೇಡಿದ ಸಂಗತಿಯನ್ನೂ ತಾವು ಆ ಸಹಾಯವನ್ನು ಕೊಡಲೊಪ್ಪಿದ ವಿಚಾರವನ್ನೂ ತಮ್ಮ ಹೆಂಡತಿಗೆ ತಿಳಿಸಿದಾಗ, ಜಯಲಕ್ಷಮ್ಮನವರು ಅವರ ನಿಶ್ಚಯವನ್ನು ಮನಃಪೂರ್ವಕವಾಗಿ ಅನುಮೋದಿಸಿದರು. ಅಳಿಯ ಮುಂದೆ ಭಾರಿಯ ವಕೀಲನಾಗುತ್ತಾನೆ, ತಮ್ಮ ಮಗಳು ಇನ್ನೂ ಎರಡು ವರ್ಷಕಾಲ ತಮ್ಮೊಂದಿಗೆಯೇ ಇರುತ್ತಾಳೆ ಎಂಬ ಹಿಗ್ಗು ಅವರಿಗೆ; ಗೌರಮ್ಮನವರು ನುಡಿದಂತೆ ಅಳಿಯನು ಮುನ್‌ಸೀಫರಾದರೂ ಆಗಬಹುದೆಂಬ ಹೆಚ್ಚಿನ ಹಿಗ್ಗು. ಭಾಗ್ಯಲಕ್ಷ್ಮಿಯೊಬ್ಬಳನ್ನು ಬಿಟ್ಟು ಉಳಿದವರೆಲ್ಲರೂ ತೃಪ್ತಿ ಸಂತೋಷಗಳಿಂದಲೆ ಕೂಡಿದ್ದರು.

## ೮
## ಬಟ್ಟೆ ಒರಟಾದಷ್ಟೂ ಮನಸ್ಸು ನಯ

ಕೃಷ್ಣಸ್ವಾಮಿ ನ್ಯಾಯಶಾಸ್ತ್ರವನ್ನು ವ್ಯಾಸಂಗ ಮಾಡಿ ವಕೀಲನಾಗುವ ಅವಕಾಶವನ್ನು ಕಲ್ಪಿಸಿಕೊಟ್ಟದ್ದು ಅವನಿಗೆ ಅತ್ಯಾನಂದವನ್ನುಂಟುಮಾಡಿದ್ದಿತು. ಆದರೆ ಆ ಆನಂದದೊಂದಿಗೆ ಮಾವನವರು ತನಗೆ ಮಾಡಿದ್ದ ಉಪಕಾರಕ್ಕಾಗಿ ಕೃತಜ್ಞತೆಯ ಭಾವ ಅವನಲ್ಲಿ ಸ್ವಲ್ಪವೂ ಇರಲಿಲ್ಲ; "ತಮ್ಮ ಮಗಳಿಗೋಸ್ಕರ ಇಷ್ಟೆಲ್ಲ ಮಾಡುತ್ತಿದ್ದಾರೆ, ಏನು ಮಹಾ ಉಪಕಾರ" ಎಂಬ ಗರ್ವದಿಂದೊಡಗೂಡಿದ ಉದಾಸೀನ ಭಾವವೇ ಹೆಚ್ಚಾಗಿದ್ದಿತು. ಅವನು ಚಂದ್ರಶೇಖರಯ್ಯನ ಮೇಲೆ ನಿಷ್ಕಾರಣವಾಗಿ ತಳೆದ ಅಸೂಯೆಯ ಬೀಜ ಅವನ ಹೃದಯದ ಹೊಲದಲ್ಲಿ ಬಿದ್ದು ಅನೇಕ ದುರ್ಭಾವನೆಗಳ ಸಂತಾನಕ್ಕೆ ಕಾರಣವಾಯಿತು. ದುರ್ಭಾವನೆ ದುಶ್ಶೀಲಕ್ಕೆ ದಾರಿ ಮಾಡಿಕೊಡಬಹುದು ಎಂಬುದು ಅವನ ಗಮನಕ್ಕೆ ಬರಲೇ ಇಲ್ಲ.

ಅಂತೂ ಅವನು ತನ್ನ ಆನಂದವನ್ನು ತನ್ನಲ್ಲಿಯೇ ಬಚ್ಚಿಟ್ಟುಕೊಳ್ಳಲಾರದೆ ಹೋದ. ನೇರವಾಗಿ ಶಾಮಣ್ಣನ ಅಂಗಡಿಗೆ ಹೋಗಿ ಈ ಸಂತೋಷದ ಸುದ್ದಿಯನ್ನು ಅವನಿಗೂ ಮುಟ್ಟಿಸಿದ. ಕೃಷ್ಣಸ್ವಾಮಿ ಗುರುವಾರ ಪ್ರಯಾಣ ಮಾಡತಕ್ಕದ್ದೆಂದು ನಾರಾಯಣಮೂರ್ತಿಗಳು ನಿಶ್ಚಯ ಮಾಡಿದ್ದರು. ಬುಧವಾರದ ದಿನ ಕೃಷ್ಣಸ್ವಾಮಿಗೆ ಔತಣದ ಏರ್ಪಾಡನ್ನೂ ಮಾಡಲಾಗಿತ್ತು; ಅವನಿಗೆ ಹೆಂಡತಿಯಿಂದ ಈ ಸಂಗತಿ ತಿಳಿದು ಬಂದಿತ್ತು. ಕೃಷ್ಣಸ್ವಾಮಿ ತಾನು ಮದರಾಸಿಗೆ ಹೋಗಲಿರುವ ಸುದ್ದಿಯನ್ನು ಶಾಮಣ್ಣನಿಗೆ ತಿಳಿಸಿದ ಮೇಲೆ, ಬುಧವಾರ ಮಧ್ಯಾಹ್ನ ತನ್ನ ಮಾವನವರ ಮನೆಗೆ ಊಟಕ್ಕೆ ಬರಬೇಕೆಂದು ಅವನಿಗೆ ಆಹ್ವಾನವಿತ್ತ. ಶಾಮಣ್ಣ ಆಹ್ವಾನವನ್ನು ಒಪ್ಪಿಕೊಳ್ಳಲು ಮೊದಲು ಹಿಂದೆಗೆದ; "ನಾನು ನಿಮ್ಮ ಮಾವನವರ ಮನೆಗೆ ಎಂದೂ ಬಂದಿಲ್ಲ. ನನಗೆ ಯಾರ ಪರಿಚಯವೂ ಇಲ್ಲ. ನಿನ್ನ ಹೆಂಡತಿಯನ್ನು ಕೂಡ ಮದುವೆಯಲ್ಲಿ ನೋಡಿದ್ದೇ ನೋಡಿದ್ದು" ಎಂದು ಏನೇನೋ ನೆಪ ಹೇಳಿ ತಪ್ಪಿಸಿಕೊಳ್ಳಲು ಪ್ರಯತ್ನಪಟ್ಟ. ಆದರೆ ಕೃಷ್ಣಸ್ವಾಮಿ ತುಂಬ ಬಲಾತ್ಕಾರ ಮಾಡಿದ ಮೇಲೆ ಅವನು ಒಪ್ಪಿಕೊಂಡ.

ಕೃಷ್ಣಸ್ವಾಮಿಯೇ ಅಂಗಡಿಗೆ ಬಂದು ತನ್ನನ್ನು ಕರೆದುಕೊಂಡು ಹೋಗ ಬೇಕೆಂದು ಶಾಮಣ್ಣ ಒಂದು ಷರತ್ತನ್ನು ಹಾಕಿದ್ದ. ಅದಕ್ಕೆ ಕೃಷ್ಣಸ್ವಾಮಿಯೂ ಒಪ್ಪಿಕೊಂಡಿದ್ದ.

ತಾನು ಮದರಾಸಿಗೆ ಹೋಗುವ ಸಂಗತಿಯನ್ನು ಶಾಮಣ್ಣನಿಗೆ ತಿಳಿಸಿ, ಅವನನ್ನು ತನ್ನ ಮಾವನವರ ಮನೆಗೆ ಔತಣದ ಊಟಕ್ಕೆ ಬರಹೇಳುವುದರಲ್ಲಿ ಕೃಷ್ಣಸ್ವಾಮಿಗೆ ಎರಡು ಉದ್ದೇಶಗಳಿದ್ದುವು: ಒಂದು, ಶಾಮಣ್ಣನಿಗೆ ತಿಳಿಯಪಡಿಸಿದ ಸಂಗತಿ ಕಾಲಕ್ರಮದಲ್ಲಿ ಸಹಜವಾಗಿ ಚಂದ್ರಶೇಖರಯ್ಯ ಮತ್ತು ರುಕ್ಮಿಣಿ—ಇವರಿಗೆ ತಿಳಿಯಬರಲಿ ಎಂಬ ಆಶೆ; ಎರಡು, ಶಾಮಣ್ಣನ ಪರಿಚಯುವನ್ನು ತನ್ನ ಮಾವನವರಿಗೆ ಮಾಡಿಕೊಟ್ಟು, ಬೇರೆಯ ಉದ್ದೇಶ ಸಾಧನೆಗಾಗಿ ಕೆಲಸಕ್ಕೆ ರಾಜೀನಾಮೆ ಕೊಡತಕ್ಕಂಥವನು ತಾನೊಬ್ಬನೇ ಅಲ್ಲ, ತನ್ನ ಹಾಗೆಯೆ ಇತರರೂ ಇದ್ದಾರೆ ಎಂಬ ಸ್ವಾಭಾವಿಕ ಸಂಗತಿಯನ್ನು ತನ್ನ ಅತ್ತೆ ಮಾವ ಹೆಂಡತಿ—ಇವರ ಗಮನಕ್ಕೆ ತರುವುದು. ಮೊದಲನೆಯ ಉದ್ದೇಶ ನೆರವೇರಿದರೆ, ಚಂದ್ರಶೇಖರಯ್ಯ ಮತ್ತು ರುಕ್ಮಿಣಿ ತನ್ನ ಮೇಲೆ ಅಸೂಯೆಪಡುವಂತಾಗುವುದು. (ಅಸೂಯಾಪರರ ಸ್ವಭಾವವೇ ಇಷ್ಟು: ತಾವು ಯಾರ ಮೇಲೆ ಅಸೂಯೆ ತಳೆದಿರುತ್ತಾರೆಯೋ ಅವರಿಗೆ ತಮ್ಮ ಮೇಲೆ ಅಸೂಯೆ ಹುಟ್ಟುವಂತೆ ಪ್ರಯತ್ನಿಸಿ, ಆ ಪ್ರಯತ್ನದಲ್ಲಿಯೇ ನಲಿಯುವುದು. ತಮ್ಮ ವಿಚಾರದಲ್ಲಿ ಅವರು ಅಸೂಯೆಪಡುವ ಬದಲು ಸಂತೋಷವನ್ನೇ ಪಡಬಹುದೆಂಬ ಎಣಿಕೆ ಇಂಥವರ ಮನಸ್ಸಿನಲ್ಲಿ ನುಸುಳು ವುದೂ ಇಲ್ಲ.) ಎರಡನೆಯ ಉದ್ದೇಶ ನೆರವೇರಿದರೆ, ತನ್ನ ಅತ್ತೆಮಾವಂದಿರು ತನ್ನ ವಿಚಾರದಲ್ಲಿ ತೃಪ್ತಿ ಸಮಾಧಾನಗಳನ್ನು ಹೊಂದುವರೆಂದು ಕೃಷ್ಣಸ್ವಾಮಿ ಬಗೆದನು.

ಕೃಷ್ಣಸ್ವಾಮಿ ಶಾಮಣ್ಣನಿಗೆ ಮಾತು ಕೊಟ್ಟಿದ್ದಂತೆ ಬುಧವಾರ ಬೆಳಗ್ಗೆ ಅವನ ಅಂಗಡಿಗೆ ಹೋಗಿ, ಮಧ್ಯಾಹ್ನ ಅವನನ್ನೂ ಜೊತೆಯಲ್ಲಿಯೆ ಊಟಕ್ಕೆ ಕರೆದುಕೊಂಡು ಬಂದನು. ಶಾಮಣ್ಣನೂ ಊಟಕ್ಕೆ ಬರುತ್ತಾನೆಂದು ಕೃಷ್ಣ ಸ್ವಾಮಿ ಮುಂದಾಗಿಯೇ ಭಾಗ್ಯಲಕ್ಷ್ಮಿಗೆ ತಿಳಿಸಿದ್ದದ್ದರೆ, ಅವಳು ಆ ವಿಚಾರ ವನ್ನು ತನ್ನ ತಾಯಿಗಾದರೂ ತಿಳಿಸದೆ ಇರುತ್ತಿರಲಿಲ್ಲ. ಅವರಿಂದ ನಾರಾಯಣ ಮೂರ್ತಿಗಳಿಗೂ ವಿಷಯ ತಿಳಿದು ಅವರೂ ಸಂತೋಷಗೊಳ್ಳುತ್ತಿದ್ದರು.

ಇಷ್ಟರ ಮಟ್ಟಿನ ಔಚಿತ್ಯಜ್ಞಾನ ಕೃಷ್ಣಸ್ವಾಮಿಗೆ ಇರಲಿಲ್ಲ. ಮಧ್ಯಾಹ್ನ ಅವನೊಂದಿಗೆ ಶಾಮಣ್ಣನೂ ಬಂದಾಗ, ಆಗತಾನೆ ಮಧ್ಯಾಹ್ನಿಕ ಮುಗಿಸಿ ಊಟಕ್ಕೆ ಎಲೆ ಹಾಕುವ ಏರ್ಪಾಡಿನಲ್ಲಿದ್ದ ನಾರಾಯಣಮೂರ್ತಿಗಳಿಗೆ ಶಾಮಣ್ಣ ಯಾರೆಂಬುದೇ ತಿಳಿಯದೆ, 'ಯಾರೋ ಸ್ನೇಹಿತರು; ಜೊತೆಯಲ್ಲಿ ಮನೆಯವರೆಗೆ ಬಂದಿದ್ದಾರೆ, ಹೋಗುತ್ತಾರೆ' ಎಂದು ಭಾವಿಸಿದರವರು. ನಾರಾಯಣಮೂರ್ತಿಗಳದು ಪೂರ್ವಕಾಲದ ರೀತಿಯ ಮನೆ; ಅತಿಥಿಗಳನ್ನು ಸ್ವಾಗತಿಸುವ ಪ್ರತ್ಯೇಕವಾದ 'ಡ್ರಾಯಿಂಗ್ ರೂಮ್' ಇರಲಿಲ್ಲ. ಆದ್ದರಿಂದ, ಕೃಷ್ಣಸ್ವಾಮಿ ಶಾಮಣ್ಣನೊಂದಿಗೆ ಜಗಲಿಯಮೇಲೆಯೇ ಕೆಲಹೊತ್ತು ಮಾತನಾಡುತ್ತ ಕುಳಿತ.

ಹಜಾರದಲ್ಲಿ ಮನೆಯವರಿಗೆ ಮಾತ್ರ ಎಲೆಹಾಕಿ ಬಡಿಸಿಯಾಗಿತ್ತು. ನಾರಾಯಣಮೂರ್ತಿಗಳು ಜಗಲಿಯ ಬಳಿಗೆ ಬಂದು, "ಏಳಪ್ಪ ಕೃಷ್ಣಸ್ವಾಮಿ, ಬಟ್ಟೆ ಬಿಚ್ಚಿ ಕೈಕಾಲು ತೊಳೆದುಕೋ. ಎಲೆಹಾಕಿ ಬಡಿಸಿದೆ" ಎಂದು ಹೇಳಿ ಒಳಕ್ಕೆ ಹೋದರು "ಏಳು ಶಾಮಣ್ಣ, ಕೈಕಾಲು ತೊಳೆದುಕೊಳ್ಳುವೆಯಂತೆ" ಎಂದು ಕೃಷ್ಣಸ್ವಾಮಿ ಶಾಮಣ್ಣನಿಗೆ ಹೇಳಿದ ಮಾತುಗಳನ್ನು ಕೇಳಿದಾಗಲೇ ಅವನು ಅತಿಥಿ ಎಂಬುದು ನಾರಾಯಣಮೂರ್ತಿಗಳಿಗೆ ತಿಳಿದದ್ದು. ತಮ್ಮಿಂದ ಏನೋ ಅಪರಾಧವಾಗಿರುವಂತೆ ಅವರಿಗೆ ಭಾಸವಾಗಿ, ಬೇಗನೆ ಇನ್ನೊಂದು ಎಲೆಹಾಕಿ ಬಡಿಸುವ ಏರ್ಪಾಡುಮಾಡಿಸುವುದಕ್ಕಾಗಿ ಅವರು ಒಳಕ್ಕೆ ಧಾವಿಸಿದರು; ಇನ್ನೊಂದು ಎಲೆಹಾಕಿ ಬೇಗನೆ ಬಡಿಸುವಂತೆ ತಮ್ಮ ಹೆಂಡತಿಗೆ ತಿಳಿಸಿದರು.

ಕೃಷ್ಣಸ್ವಾಮಿ ಒಳಕ್ಕೆ ಹೋಗಿ, ಬಟ್ಟೆಬಿಚ್ಚಿ, ಕೈಕಾಲು ತೊಳೆದುಕೊಂಡು, ಒಂದು ಟವಲು ತಂದು ಅದನ್ನು ಶಾಮಣ್ಣನ ಕೈಗಿತ್ತು, ಅವನನ್ನು ಬಚ್ಚಲಮನೆಗೆ ಕರೆದೊಯ್ಯುವಾಗ, ಇನ್ನೊಂದು ಎಲೆಹಾಕಿ ಬಡಿಸುತ್ತ ಇದ್ದದ್ದು ಶಾಮಣ್ಣನ ದೃಷ್ಟಿಗೆ ಬಿದ್ದಿತು. ತನ್ನನ್ನು ಊಟಕ್ಕೆ ಕರೆದಿರುವ ವಿಚಾರವನ್ನು ಕೃಷ್ಣಸ್ವಾಮಿ ಮನೆಯಲ್ಲಿ ಮುಂದಾಗಿ ತಿಳಿಸಿರಲಾರ ಎಂದು ಶಾಮಣ್ಣ ಸುಲಭವಾಗಿ ಊಹಿಸಿದ. ಇದರಿಂದ ಅವನ ಮನಸ್ಸಿಗೆ ತುಸ ಅಸಮಾಧಾನವೂ, ಅದಕ್ಕಿಂತ ಹೆಚ್ಚಿನ ಖೇದವೂ ಉಂಟಾದುವು. ಆದರೆ

ಆ ಭಾವನೆಗಳನ್ನು ಅವನು ಒಡನೆಯೇ ನುಂಗಿಕೊಂಡು, ಕೈಕಾಲು ತೊಳೆದು ಕೊಂಡು ಕೃಷ್ಣಸ್ವಾಮಿಯೊಂದಿಗೆ ಊಟಕ್ಕೆ ಎದ್ದ.

ಎಲ್ಲರೂ ಊಟಕ್ಕೆ ಕುಳಿತರು. ಸಾರನ್ನ ಊಟಮಾಡುವಾಗ ಎಲ್ಲರೂ ಮೌನವಾಗಿಯೇ ಇದ್ದರು. ಮಜ್ಜಿಗೆ ಪಳಿದ್ಯ ಬಡಿಸಲು ಬಂದಾಗ ಗೌರಮ್ಮ ನವರು, "ಲಿಂಗಣ್ಣಯ್ಯನವರ ಮಗ ಶಾಮು ಅಲ್ಲವೇನಪ್ಪಾ ?" ಎಂದು ಆದರದಿಂದ ಕೇಳಿದರು. ಶಾಮಣ್ಣ "ಹೌದು" ಎಂದು ಉತ್ತರಿಸಿದ. ಶಾಮಣ್ಣ ಯಾರು ಎಂಬುದು ನಾರಾಯಣಮೂರ್ತಿಗಳಿಗೆ ಗೊತ್ತಾದದ್ದು ಈಗಲೆ. ಅವರು ಆಗ ಬಾಯಿಬಿಟ್ಟರು :

"ನೀನು ಲಿಂಗಣ್ಣಯ್ಯನವರ ಮಗ ಅಂತ ನನಗೆ ಗೊತ್ತೇ ಆಗಲಿಲ್ಲ. ನೋಡಿ ತುಂಬ ಕಾಲವಾಯಿತಪ್ಪ. ಭಾಗ್ಯನ ಮದುವೆಯಲ್ಲಿ ನೋಡಿದ್ದು, ಅಷ್ಟೆ. ನಮ್ಮ ಗೌರಕ್ಕನಿಗಾದರೆ ಒಳ್ಳೆಯ ನೆನಪು. ನೀನು ದೊಡ್ಡ ಮನಸ್ಸು ಮಾಡಿ ನಮ್ಮ ಮನೆಗೆ ಬಂದದ್ದು ತುಂಬ ಸಂತೋಷವಾಯಿತಪ್ಪ."

"ಈಗ ಲಿಂಗಣ್ಣಯ್ಯ ಎಲ್ಲಿದ್ದಾರೆ ? ಮನೆಯಲ್ಲಿ ಎಲ್ಲ ಕ್ಷೇಮ ತಾನೆ ?" ಎಂದು ಗೌರಮ್ಮನವರು ಪ್ರಶ್ನಿಸಿದರು.

"ನಂಜನಗೂಡಿನಲ್ಲಿದಾರೆ. ಎಲ್ಲ ಕ್ಷೇಮ" ಎಂದ ಶಾಮಣ್ಣ.

"ಸಂತೋಷ ಕಣಪ್ಪ" ಎಂದು ಗೌರಮನವರು ಬಡಿಸುವ ಕಾರ್ಯದಲ್ಲಿ ತೊಡಗಿದರು.

ಭಾಗ್ಯಲಕ್ಷ್ಮಿಯೂ ತೊಟ್ಟಿಯಲ್ಲಿಯೇ ಒಂದು ಕಡೆ ಸ್ವಲ್ಪ ದೂರದಲ್ಲಿ ಊಟಕ್ಕೆ ಕುಳಿತಿದ್ದಳು. ಅವಳ ಮದುವೆಯಲ್ಲಿ ಮಾತ್ರ ಶಾಮಣ್ಣ ಅವಳನ್ನು ನೋಡಿದ್ದ. ಈಗ ಅಪ್ರಯತ್ನವಾಗಿಯೇ ಅವನು ಅವಳನ್ನು ಒಂದು ಸಲ ನೋಡಿದ. ಅವಳ ಸೌಮ್ಯಸುಂದರಾಕೃತಿಯಲ್ಲಿ ಅದು ಏನೋ ಒಂದು ಬಗೆಯ ಪವಿತ್ರದಿವ್ಯಗುಣವಿದೆಯೊಂದು ಅವನಿಗೆ ತೋರಿ, ಎರಡುಮೂರು ಸಲ ಅವಳ ಕಡೆ ದೃಷ್ಟಿ ತಿರುಗಿಸಿ ನೋಡಿದ. "ನನ್ನ ತಂಗಿ ರುಕ್ಮಿಣಿಗಿಂತ ಇವಳು ಚೆನ್ನಾಗಿದಾಳೆ. ಮಂಗಳಗೌರಿ ಇದ್ದಹಾಗೆ ಇದಾಳೆ. ಇಂಥ ಹೆಂಡತಿದೊರೆತಿರುವುದು ಕೃಷ್ಣಸ್ವಾಮಿಯ ಪುಣ್ಯ" ಎಂದು ಶಾಮಣ್ಣ ಮನಸ್ಸಿನಲ್ಲಿ ಭಾವಿಸಿದ.

ಹಬ್ಬದ ಊಟಮಾಡುವಾಗ, ಭಕ್ಷ್ಯಗಳನ್ನು ಭುಂಜಿಸುವಂದು 'ಕೈ ಬಾಯ ಕದನ' ಸುಮಧುರ ಬಾಂಧವ್ಯದೊಡನೆ ಸಾವಧಾನವಾಗಿ ನಡೆಯುತ್ತ,

ಒಂದರೊಡನೆ ಒಂದು ಆಶ್ಚರ್ಯಕರ ರೀತಿಯಲ್ಲಿ ಸಹಕರಿಸುತ್ತ, ಬಾಯಿ ಮೆಲ್ಲುವ ಕಾರ್ಯದೊಂದಿಗೆ ಮಾತಿಗೂ ತೊಡಗುತ್ತದೆ. ಜಯಲಕ್ಷಮ್ಮನವರು ಆಗತಾನೆ ಬಡಿಸಿಹೋಗಿದ್ದ ಲಡ್ಡುಗೆಯನ್ನು ಮುರಿದು ಬಾಯಿಗೆ ಹಾಕಿ ಕೊಂಡು, ನಾರಾಯಣಮೂರ್ತಿಗಳೇ ಮಾತೆತ್ತಿದರು :

" ನೀನೂ ನಮ್ಮ ಕೃಷ್ಣಸ್ವಾಮಿಯ ಜೊತೆಯಲ್ಲೆ ಬಿ. ಎ. ಮಾಡಿದವ ನಲ್ಲವೆ ? "

ಶಾಮಣ್ಣ : " ಹೌದು."

" ಈಗ ಏನು ಮಾಡಿಕೊಂಡಿದ್ದೀಯಪ್ಪ ? "

" ಖಾದಿ ಮತ್ತು ಸ್ವದೇಶಿ ಅಂಗಡಿ ಇಟ್ಟಿದೀನಿ."

" ಯಾಕೆ, ಯಾವುದಾದರೂ ಕೆಲಸಕ್ಕೆ ಸೇರಬಹುದಾಗಿತ್ತಲ್ಲ ? "

" ಸರ್ಕಾರಿ ಹೈಸ್ಕೂಲಿನಲ್ಲಿ ಮೇಷ್ಟರ ಕೆಲಸಕ್ಕೆ ಸೇರಿದ್ದೆ. ಅದಕ್ಕೆ ರಾಜೀನಾಮೆ ಕೊಟ್ಟು ಅಂಗಡಿ ತೆರೆದೆ."

ಕೃಷ್ಣಸ್ವಾಮಿ ನಿರೀಕ್ಷಿಸಿದ್ದ ರೀತಿಯಲ್ಲಿಯೇ ಮಾತುಕತೆ ಸಾಗ ತೊಡಗಿತು ; ಅವನಿಗೆ ತೃಪ್ತಿಯಾಯಿತು, ಸಂತೋಷವಾಯಿತು.

" ಅದು ಯಾಕಪ್ಪ ಹೀಗೆ ಮಾಡಿದೆ ? ನಿಮ್ಮ ತಂದೆ ಒಪ್ಪಿದರೆ ? "

" ಕೆಲಸಕ್ಕೆ ರಾಜೀನಾಮೆ ಕೊಡುತ್ತೇನೆ ಎಂದರೆ ಯಾರು ತಾನೆ ಒಪ್ತಾರೆ ಹೇಳಿ ? ಗಾಂಧಿಯವರ ಬೋಧನೆ ಓದಿ ಕೇಳಿ ನನಗೆ ಹಾಗೆ ಮಾಡಬೇಕೆನ್ನಿಸಿತು. ಹಾಗೆ ಮಾಡಿಬಿಟ್ಟೆ. ಕೆಲವು ದಿನ ನಮ್ಮ ತಂದೆಗೂ ಅಸಮಾಧಾನವೇ ಆಗಿತ್ತು. ಈಗ ಸಂತೋಷವಿಲ್ಲದಿದ್ದರೂ 'ಎತ್ತಲಾಗಾದರೂ ಹಾಳಾಗಿ ಹೋಗಲಿ' ಎಂದು ಸುಮ್ಮನಿದ್ದಾರೆ ಅಂತ ಕಾಣುತ್ತೆ. ಅಂತೂ ಈಗ ನಮ್ಮ ಮನೆಯವರೆಲ್ಲಾ ಖಾದಿಯನ್ನೇ ಧರಿಸುತ್ತೇವೆ. ನಮ್ಮ ತಂದೆಯೂ ಚರಕದಲ್ಲಿ ನೂಲು ತೆಗೆಯುತ್ತಾರೆ. ನೀವೂ ಖಾದಿ ಧರಿಸಬೇಕು. ಬೇಕಾದರೆ ತಂದುಕೊಡುತ್ತೇನೆ. ಗಾಂಧಿ ಹೇಳುತ್ತಿರುವುದು ಇದೇ : ಖಾದಿಯೇ ಸ್ವರಾಜ್ಯಕ್ಕೆ ಹಾದಿ ; ಇನ್ನು ಬೇರೆ ಯಾವ ರೀತಿ ಸಾಧ್ಯವಿಲ್ಲ ದಿದ್ದರೂ ಖಾದಿಧರಿಸುವುದರ ಮೂಲಕ ಹೆಂಗಸು ಗಂಡಸೆನ್ನದೆ ಪ್ರತಿಯೊಬ್ಬ ಭಾರತೀಯ ಪ್ರಜೆಯೂ ದೇಶಸೇವೆ ಮಾಡಬೇಕು."

ಶಾಮಣ್ಣನ ಈ ಪುಟ್ಟ ಭಾಷಣವನ್ನು ಕೇಳಿ ಕೃಷ್ಣಸ್ವಾಮಿಗೆ ಒಳಗೊಳಗೇ ನಗು.

ನಾರಾಯಣಮೂರ್ತಿಗಳು ಗಾಂಧಿಯವರ ಬೋಧನೆಗಳನ್ನು ಅವರಿವರಿಂದ ಕೇಳಿ ಬಲ್ಲರು. ಅವರು ತಮ್ಮ ಚಿಕ್ಕಂದಿನಲ್ಲಿ ಬಡತನದ ಬೇಗೆಯನ್ನು ಅರಿತವರಾದ್ದರಿಂದ, ಸ್ವರಾಜ್ಯದ ಮಾತು ಹಾಗಿರಲಿ, ಬಡಜನರ ಉದ್ಧಾರಕ್ಕೆಂದು ಬಾಳನ್ನು ಮೀಸಲಿರಿಸಿದ್ದ ಗಾಂಧಿಯವರ ಬಗ್ಗೆ ಅವರಿಗೆ ಗೌರವವೇ ಇತ್ತು. ಅಲ್ಲದೆ, ಮನೆಯಲ್ಲಿ ಬೇರೆ ರಾಮಮೂರ್ತಿ ವೆಂಕಟೇಶಮೂರ್ತಿ ಆಗಾಗ ಗಾಂಧಿಯ ಹೆಸರನ್ನು ಎತ್ತುತ್ತಲೇ ಇದ್ದರು; 'ಖಾದಿ ಬಟ್ಟೆಯಲ್ಲಿ ಷರಟು ಹೊಲಿಸಿಕೊಡಪ್ಪ' ಎಂದು ಅನೇಕ ಸಲ ಪೀಡಿಸಿದ್ದರು. ಇದಕ್ಕೆ, 'ಖಾದಿ ಬಟ್ಟೆ ಬಾಳಿಕೆ ಬರುವುದಿಲ್ಲ' ಎಂದಷ್ಟೇ ಅವರು ಉತ್ತರ ಹೇಳಿದ್ದರು. ಈಗ ಅವರು—

"ಖಾದಿ ಬಾಳಿಕೆ ಬರುತ್ತದೆಯೆ ಶಾಮಣ್ಣಾ?" ಎಂದು ಪ್ರಶ್ನಿಸಿದರು.

"ಮಿಲ್ಲು ಬಟ್ಟೆಗಿಂತ ಹೆಚ್ಚು ಬಾಳಿಕೆ ಬರುತ್ತೆ" ಎಂದ ಶಾಮಣ್ಣ.

"ಬೆಲೆ ಸ್ವಲ್ಪ ಹೆಚ್ಚಲ್ಲವೆ?"

"ಆ ಹೆಚ್ಚಿನ ಬೆಲೆ ನಮ್ಮ ದೇಶದಲ್ಲೇ ಉಳಿದು ಬಡವರ ಹೊಟ್ಟೆ ತುಂಬಿಸುತ್ತದೆಯಲ್ಲ?"

"ಅದು ಸರಿ" ಎಂದು ಒಪ್ಪಿದರು ನಾರಾಯಣಮೂರ್ತಿಗಳು.

"ನೀನು ಏನು ಬೇಕಾದರೂ ಹೇಳು ಶಾಮಣ್ಣ, ಖಾದಿ ಶುದ್ಧ ಒರಟು ಬಟ್ಟೆ" ಎಂದು ಅಡ್ಡವಾಕ್ಯವೊಂದನ್ನು ನುಡಿದ ಕೃಷ್ಣಸ್ವಾಮಿ.

"ಬಟ್ಟೆ ಒರಟಾದಷ್ಟೂ ಮನಸ್ಸು ನಯವಾಗುತ್ತೆ" ಎಂದು ನಕ್ಕು ನುಡಿದ ಶಾಮಣ್ಣ.

ಹೀಗೆ ಮಾತುಕತೆ ಸಾಗುತ್ತಿರುವಾಗ, ರಾಮಮೂರ್ತಿ ವೆಂಕಟೇಶಮೂರ್ತಿ ಶಾಲೆಯಿಂದ ಊಟಕ್ಕಾಗಿ ಬಿಡುವು ಪಡೆದು ಮನೆಗೆ ಬಂದರು. ವೆಂಕಟೇಶಮೂರ್ತಿಯ ತಲೆಯ ಮೇಲೆ ಬಿಳಿಯ ಖಾದಿಯ ಟೋಪಿಯಿತ್ತು. ಅವರು ಒಳಹೊಕ್ಕ ಕೂಡಲೆ ಶಾಮಣ್ಣನ ಗಮನ ಆ ಟೋಪಿಯ ಕಡೆಗೆ ಹೋಯಿತು.

"ಪರವಾಯಿಲ್ಲ. ನಿಮ್ಮ ಒಬ್ಬ ಮಗನ ತಲೆಯ ಮೇಲಕ್ಕೆ ಖಾದಿ ಟೋಪಿ ಬಂದಿದೆ" ಎಂದು ಶಾಮಣ್ಣ ಹಿಗ್ಗಿನಿಂದ ನುಡಿದ.

"ಆವೊತ್ತು ನೀನು ನನಗೆ ಕೊಟ್ಟೆಯಲ್ಲಪ್ಪ, ಅದನ್ನು ವೆಂಕಟೇಶನಿಗೆ ಕೊಟ್ಟೆ ನಾನು"—ಎಂದು ಕೃಷ್ಣಸ್ವಾಮಿ ಹೇಳಿದ.

"ಓಹೋ, ಹಾಗೋ! ಸದ್ಯ ಅದನ್ನು ನೀನು ಚರಂಡಿಗೆ ಎಸೆಯ ಲಿಲ್ಲವಲ್ಲ. ಅವನಿಗೆ ನನ್ನ ಬಹುಮಾನವೇ ಆದಹಾಗಾಯಿತು ಇನ್ನೊಬ್ಬನಿಗೂ ಒಂದು ಟೋಪಿಯನ್ನು ತಂದುಕೊಡುತ್ತೇನೆ" ಎಂದು ಸಮಾಧಾನಗೊಂಡು ನುಡಿದ ಶಾಮಣ್ಣ.

ಮಾತಿನ ನಡುವೆ ಭೋಜನ ಮುಂದೆ ಸಾಗಿರಲಿಲ್ಲ; ಎಲ್ಲರೂ ಕೆಲಹೊತ್ತು ಮೌನವಾಗಿ ಆಗತಾನೆ ಬಡಿಸಿದ್ದ ಬಿಸಿಬಿಸಿ ಬೋಂಡಗಳನ್ನು ತಿನ್ನುತ್ತ, ಹಾಲುಕೀರು ಕುಡಿಯುವುದಕ್ಕೆ ತೊಡಗಿದರು.

ಆದರೆ ನಾರಾಯಣಮೂರ್ತಿಗಳ ಮನಸ್ಸು ಮಾತ್ರ ಯೋಚನೆಯಲ್ಲಿ ಮುಳುಗಿತ್ತು. ಶಾಮಣ್ಣ ತಾನು ದೇಶಸೇವೆಯ ಕಾರ್ಯದಲ್ಲಿ ನೆರವಾಗು ತ್ತೇನೆಂದು ಕೆಲಸ ಬಿಟ್ಟು ಕುಳಿತಿದ್ದಾನೆ; ತಮ್ಮ ಅಳಿಯ ವಕೀಲನಾಗ ಬೇಕೆಂದು ಕೆಲಸ ಬಿಟ್ಟು ಕುಳಿತಿದ್ದಾನೆ. ಇವರಿಬ್ಬರ ಪರಿಣಾಮ ಮುಂದೇ ನಾಗುತ್ತದೆಯೋ? ಅವರವರ ಹಣೆಯಬರಹ, ಭಾಗ್ಯ. ಮುಂದಾಗುವುದನ್ನು ಕಂಡವರಾರು? ತಮ್ಮ ಅಳಿಯ ಗಣ್ಯನಾದ ವಕೀಲನೇ ಆಗಬಹುದು. ಹಾಗಾದರೆ ಭಾಗ್ಯಲಕ್ಷ್ಮಿಯ ಪುಣ್ಯ.

ಮಾತುಕತೆಯಲ್ಲಿ ಬೆರೆಯದೆ ಮೌನವಾಗಿ ಊಟ ಮಾಡುತ್ತಿದ್ದ ಭಾಗ್ಯಲಕ್ಷ್ಮಿಯ ಮನಸ್ಸಿನಲ್ಲಿಯೂ ಇದೇ ಬಗೆಯ ಆಲೋಚನೆ; ಒಂದು ಬಗೆಯ ಕಳವಳ. ತಾನು ಮುಂದೆ ವಕೀಲನ ಹೆಂಡತಿಯಾಗುತ್ತೇನೆಂದು ಮನಸ್ಸಿನಲ್ಲಿ ಮಂಡಿಗೆ ಮುರಿಯಲಿಲ್ಲ. ಗಂಡ ದೂರದ ಊರಿಗೆ ಹೋಗುತ್ತಿ ದ್ದಾರೆ; ದೇವರು ಅವರನ್ನು ಅಲ್ಲಿ ಕಾಪಾಡಲಿ ಎಂದು ಕೋರಿದಳು.

೬

## ಬೀಳ್ಕೊಳಿಕೆ

ಕೃಷ್ಣಸ್ವಾಮಿ ರೈಲಿಗೆ ಹೊರಡಲು ಸಿದ್ಧನಾಗಿ ನಿಂತಿದ್ದಾನೆ; ರಾಮ ಮೂರ್ತಿ ಗೊತ್ತುಮಾಡಿಕೊಂಡು ಬಂದ ಜಟಕಗಾಡಿ ಮನೆಯ ಮುಂದೆ ನಿಂತಿದೆ. ಪ್ರಯಾಣದ ಸಡಗರ ಸಂಭ್ರಮಗಳಲ್ಲಿ ಕಳವಳ ಕಂಬನಿಗಳೂ ಬೆರೆತಿವೆ. ಭಾಗ್ಯಲಕ್ಷ್ಮಿ ಕೋಣೆಯಲ್ಲಿ ತಾಂಬೂಲದ ತಟ್ಟೆಯನ್ನು ಸಿದ್ಧವಾಗಿ ಇರಿಸಿಕೊಂಡು ಪತಿಯ ಬರವನ್ನು ಕಾಯುತ್ತಿದ್ದಾಳೆ.

ಕೃಷ್ಣಸ್ವಾಮಿ ಭಾಗ್ಯಲಕ್ಷ್ಮಿಯಿದ್ದ ಕೋಣೆಯನ್ನು ಹೊಕ್ಕನು. ಅವಳು ಮಂಚದ ಮೇಲೆ ತಲೆಬಗ್ಗಿಸಿಕೊಂಡು, ಹನಿಯುತ್ತಿದ್ದ ಕಣ್ಣೀರನ್ನು ಸೆರಗಿನ ಕೊನೆಯಿಂದ ಒರಸಿಕೊಳ್ಳುತ್ತ ಕುಳಿತಿದ್ದಳು. ಕೃಷ್ಣಸ್ವಾಮಿ ಹೋಗಿ ಅವಳ ಪಕ್ಕದಲ್ಲಿ ಕುಳಿತನು.

"ಅಲ್ಲ, ನಾನು ಹೊರಡುವಾಗ ಸಂತೋಷವಾಗ ಕಳಿಸಿಕೊಡುವುದು ಬಿಟ್ಟು ಅಳುತ್ತ ಕಳಿಸಿಕೊಡುತ್ತೀಯಾ?"

ಭಾಗ್ಯಲಕ್ಷ್ಮಿಯ ಮನಸ್ಸು ಈ ಪ್ರಶ್ನೆಗೆ ಸಮಂಜಸವಾದ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. "ತಾಂಬೂಲ ಹಾಕಿಕೊಳ್ಳುವುದಿಲ್ಲವೆ?" ಎಂದು ಗದ್ಗದಿಸುತ್ತಲೇ ಕೇಳಿದಳು.

"ರೈಲಿಗೆ ಹೊತ್ತಾಯಿತು. ತಾಂಬೂಲ ಹಾಕಿಕೊಳ್ಳುವಷ್ಟು ಪುರ ಸೊತ್ತೆಲ್ಲಿದೆ?"

"ಎಲೆಗೆ ಸುಣ್ಣ ಹಾಕಿಟ್ಟದೇನೆ."

"ಹಾಗಾದರೆ ಕೊಡು" ಎಂದು ಬಣ್ಣಕಟ್ಟಿದ ಅಡಕೆಯನ್ನು ಬಾಯಿಗೆ ಹಾಕಿಕೊಂಡ ಕೃಷ್ಣಸ್ವಾಮಿ.

ಭಾಗ್ಯಲಕ್ಷ್ಮಿ ಸುಣ್ಣಹಾಕಿದ್ದ ಚಿಗುರೆಲೆಯ ಸೀಳುಗಳನ್ನು ಮಡಿಸಿ, ಮಡಿಸಿದ ಎಲೆಯನ್ನು ನೀಡಿದಳು.

"ಎಷ್ಟು ಸಲ ಹೇಳಬೇಕೆ ನಿನಗೆ? ಎಲೆ ಕೊಡುವುದು ಹೀಗೆಯೆ?" ಎಂದು ಆಕ್ಷೇಪಿಸಿ, 'ಆ' ಎಂದು ಬಾಯಿ ತೆರೆದನು ಕೃಷ್ಣಸ್ವಾಮಿ. ಭಾಗ್ಯ ಲಕ್ಷ್ಮಿ ಮಡಿಸಿದ ಎಲೆಯನ್ನು ಅವನ ಬಾಯಿಗಿಟ್ಟಳು.

" ಇದೀಗ ಸರಿ " ಎಂದು ತೃಪ್ತಿಗೊಂಡ ಕೃಷ್ಣಸ್ವಾಮಿ.

ಎರಡು ಕ್ಷಣ ಇಬ್ಬರೂ ಮೌನವಾಗಿದ್ದರು.

" ನಗುನಗುತ್ತ ಎರಡು ಮಾತಾಡಬಾರದೆ ?"

ಏನನ್ನೋ ಕೇಳಿದರೆ ಏನನ್ನೋ ಹೇಳಿದಳು ಆ ಮುಗ್ಧ ತರುಣಿ :

" ಮನೆಯ ಏರ್ಪಾಡು ಏನು ಮಾಡಿದ್ದೀರಿ ? "

" ಯಾವ ಮನೆ ? "

" ಬೆಂಗಳೂರಿನಲ್ಲಿ ನಾವಿದ್ದ ಬಾಡಿಗೆಯ ಮನೆ. ಮನೆಯವರಿಗೆ ಹೇಳಿ ಬಂದಿಲ್ಲ. ಪಾತ್ರೆಪಾದಾರ್ಥಗಳೆಲ್ಲ ಹಾಗೆಯೇ ಬಿದ್ದಿವೆ. ಅವನ್ನೆಲ್ಲ ತರುವವರು ಯಾರು ? "

" ನನ್ನನ್ನ ಅಷ್ಟು ದಡ್ಡ ಅಂತ ಭಾವಿಸಿದೆಯಾ? ಸಂಸಾರವನ್ನೆಲ್ಲ ನಿನ್ನ ತಲೆಯಮೇಲೇ ಹೊತ್ತುಕೊಂಡಹಾಗೆ ಮಾತಾಡುತ್ತಿ. ಶಾಮಣ್ಣನಿಗೆ ಹೇಳಿ ಒಪ್ಪಿಸಿ, ಮನೆಯ ಬೀಗದ ಕೈ ಅವನ ಕೈಗೆ ಕೊಟ್ಟಿದೇನೆ. ಅವನು ಮುಂದಿನ ತಿಂಗಳು ಬೆಂಗಳೂರಿಗೆ ಹೋಗಬೇಕಾಗಿದೆಯಂತೆ. ಹೋದಾಗ ಪಾತ್ರೆಪದಾರ್ಥಗಳನ್ನೆಲ್ಲ ತರುತ್ತಾನೆ. ಅದರದ್ದೇನು ಮಹಾ ದೊಡ್ಡ ವಿಷಯ."

" ಇನ್ನೊಬ್ಬರಿಗೆ ತೊಂದರೆ ಕೊಡುವಹಾಗಾಯಿತು. ಹೀಗೆ ಅಂತ ತಿಳಿದಿದ್ದರೆ, ನಾವೇ ಬರುವಾಗ ಜೊತೆಯಲ್ಲಿ ತಂದುಬಿಡಬಹುದಾಗಿತ್ತು."

" ಭೇಷ್ ! ಒಳ್ಳೆ ಬುದ್ಧಿವಂತೆ ಕಣೇ ನೀನು ! ಪಾತ್ರೆಗೀತ್ರೆ ಎಲ್ಲ ಗಂಟುಮೂಟೆ ಕಟ್ಟಿಕೊಂಡು ನಾನು ಇಲ್ಲಿಗೆ ಬಂದಿದ್ದಿದ್ದರೆ ನಿಮ್ಮಪ್ಪನ ಎದೆ ಧಸಕ್ ಎಂದು ಕುಸಿದುಹೋಗುತ್ತಿತ್ತು. ಅವರು ಸಹಾಯ ಮಾಡಲು ಒಪ್ಪದೆ ಹೋಗಿದ್ದಿದ್ದರೆ, ಮತ್ತೆ ಗಂಟುಮೂಟೆ ಕಟ್ಟಿಕೊಂಡು ನಿನ್ನನ್ನೂ ಕರೆದು ಕೊಂಡು ಬಂದ ದಾರಿಗೆ ಸುಂಕವನ್ನೂ ತೆತ್ತು, ಮುಖ ತಗ್ಗಿಸಿಕೊಂಡು ಹಿಂದಿರುಗಬೇಕಾಗಿತ್ತು. ಈಗ ನೋಡು, ನಾನು ನಡೆದುಕೊಂಡ ರೀತಿಯಲ್ಲಿ ಎಲ್ಲ ಗಂಭೀರವಾಗಿ ಸಾಗಿತು. ಮೊದ್ದು ಕಣೆ ನೀನು, ಮೊದ್ದು........ ಹೊರಡುವ ಹೊತ್ತಿನಲ್ಲಿ ಸರಸವಾಗಿ ಎರಡು ಪ್ರೀತಿಯ ಮಾತು ಆಡೇ ಎಂದರೆ, ಮನೆ ಪಾತ್ರೆ ಅಂತ ಅಡುಗೂಳಜ್ಜಿಯ ಹಾಗೆ ಮಾತು ತೆಗೆದೆಯಲ್ಲ? ಹೇಗಿದ್ದರೂ ಎರಡು ವರ್ಷಕಾಲ ನಿನಗೆ ಬಿಡುವು ದೊರಕಿದೆ. ನಿನ್ನ

ತಮ್ಮಂದಿರ ಸ್ಕೂಲು ಲೈಬ್ರರಿಯಿಂದ ವೆಂಕಟಾಚಾರ್ಯರ ಕಾದಂಬರಿ ಗಳನ್ನು ತರಿಸಿಕೊಂಡು ಓದು. ಹೆಂಡತಿಯಾದವಳು ಗಂಡನ ಕೂಡ ಹೇಗೆ ಸರಸವಾಗಿ ಮಾತನಾಡಬೇಕು ಎನ್ನುವುದು ಗೊತ್ತಾಗುತ್ತೆ."

"ಅಂದರೆ ... ...ಎರಡು ವರ್ಷ ಆಗುತ್ತೆಯೋ, ನೀವು ಬರುವುದಕ್ಕೆ ?" ಎಂದು ನಿರಾಶೆಗೊಂಡು ನುಡಿದಳು ಭಾಗ್ಯಲಕ್ಷ್ಮಿ.

"ನನಗೇನು, ರಜಾ ಇದ್ದಾಗಲೆಲ್ಲ ಬರುತ್ತೇನೆ. ನಿಮ್ಮಪ್ಪನ ಹಣ ಕರಗುತ್ತೆ, ಅಷ್ಟೆ" ಎಂದು ಮೆಲ್ಲನೆ ನಕ್ಕು ನುಡಿದ ಕೃಷ್ಣಸ್ವಾಮಿ.

"ನಿಮ್ಮ ಆರೋಗ್ಯ ಚೆನ್ನಾಗಿ ನೋಡಿಕೊಳ್ಳಿ. ಕ್ಷೇಮಕ್ಕೆ ಮನೆಗೆ ಕಾಗದ ಬರೆಯುತ್ತಿರಿ" ಎಂದು ತುಂಬುಪ್ರೇಮದಿಂದ ನುಡಿದಳು ಭಾಗ್ಯ ಲಕ್ಷ್ಮಿ. ಕುಹಕದ ಮನೋಭಾವದಲ್ಲಿದ್ದ ಕೃಷ್ಣಸ್ವಾಮಿಗೆ ಆ ಪ್ರೇಮವನ್ನು ಅರಿತುಕೊಳ್ಳುವ ಸಹೃದಯತೆ ಎಚ್ಚರಗೊಳ್ಳಲಿಲ್ಲ.

"ಮನೆಗೋ ನಿನಗೋ ?"

"ನಿಮ್ಮ ಪುಣ್ಯ, ನನಗೆ ಬರೆಯಬೇಡಿ. ಮನೆಗೆ ಬರೆದರೆ ಸಮಾಚಾರ ನನಗೂ ತಿಳಿದೇ ತಿಳಿಯುತ್ತೆ."

"ಮನೆಗೂ ಬರೆಯುತ್ತೇನೆ, ನಿನಗೂ ಬರೆಯುತ್ತೇನೆ. ನಿನ್ನಿಂದ ನನ್ನ ಕಾಗದಕ್ಕೆ ಉತ್ತರ ಬಂದರೇ ಆ ಮೇಲೆ ನನ್ನ ಕಾಗದ. ಇಲ್ಲದೆ ಹೋದರೆ, ನಾನು ಯಾರಿಗೂ ಬರೆಯುವುದೇ ಇಲ್ಲ."

"ನನಗೆ ಕಾಗದ ಬರೆಯುವುದಕ್ಕೆ ಬರುವುದಿಲ್ಲ. ಆಗಲಿ, ನೋಡೋಣ."

ಇಷ್ಟು ಹೊತ್ತಿಗೆ, ರಾಮಮೂರ್ತಿ ತೊಟ್ಟಿಯಿಂದ ಗಟ್ಟಿಯಾಗಿ ಕೂಗಿ ಹೇಳಿದ:

"ಭಾವಯ್ಯ, ಗಾಡಿಯವನು ಬೊಮ್ಮಡ ಬಜಾಯಿಸುತ್ತ ಇದಾನೆ. ರೈಲಿಗೆ ಹೊತ್ತಾಯಿತಂತೆ ಭಾವಯ್ಯ."

"ಸರಿ, ಇನ್ನು ನಾನು ಹೊರಡುತ್ತೇನೆ" ಎಂದು ಕೃಷ್ಣಸ್ವಾಮಿ ಎದ್ದು ನಿಂತ.

ಭಾಗ್ಯಲಕ್ಷ್ಮಿ ತಟ್ಟನೆ ಬಾಗಿ, ಪತಿಯ ಪಾದಗಳಿಗೆ ಎರಗಿದಳು. ಅವಳ ಎರಡು ಕೋಮಲವಾದ ಕೈಗಳೂ ಅವನ ಎರಡು ಕಠಿನವಾದ ಪಾದಗಳನ್ನು ಹಿಡಿದಿದ್ದುವು; ಅವಳ ಹಣೆ ಅವನ್ನು ಸೋಕಿದ್ದಿತು; ದುಃಖದ

ಕಟ್ಟೆಯೊಡೆದು ಹರಿದ ಕಣ್ಣೀರ ಕೋಡಿ ಅವನ್ನು ತೊಳೆದವು. ಬಿಸಿಯಾದ ಕಣ್ಣೀರು ತನ್ನ ಕಾಲುಗಳನ್ನು ತೋಯಿಸಿದ್ದು ಕೃಷ್ಣಸ್ವಾಮಿಗೆ ಅರಿವಾಯಿತು; ಆ ಕಣ್ಣೀರ ಒಂದೊಂದು ಹನಿಯಲ್ಲೂ ಅಡಗಿದ್ದ ಸಂಕ್ಷಿಪ್ತ ಪ್ರೇಮ ಪ್ರಪಂಚದ ಅರಿವು ಮಾತ್ರ ಅವನಿಗೆ ಸಂಪೂರ್ಣವಾಗಿ ಆಗಲಿಲ್ಲ.

"ನನಗೆ ನಮಸ್ಕಾರ ಮಾಡಬೇಕೆಂದು ನಾನು ಕೇಳಿದೆನೆ? ಅದಕ್ಕಾಗಿ ಎದ್ದು ನಿಂತುಕೊಂಡೆನೆ? ಹೆಂಡತಿ ಗಂಡನಿಗೆ ಪ್ರೀತಿ ತೋರಿಸುವುದು ಹಾಗಲ್ಲ, ಹೀಗೆ" ಎಂದು ಹಿಂದೆ ಅನೇಕ ಸಲ ಅವಳಿಗೆ ಕಲಿಸಿಕೊಟ್ಟಿದ್ದಂತೆ ಇಂದೂ ಕಡೆಯ ಸಲ ಕಲಿಸಿಕೊಟ್ಟ.

ಇದರಿಂದ ಭಾಗ್ಯಲಕ್ಷ್ಮಿಗೆ ಅಮಿತಾನಂದವಾಯಿತು. ಕಹಿಯೊಂದಿಗೆ ಸಿಹಿ ಬೆರೆಯಿತು.

ಕೃಷ್ಣಸ್ವಾಮಿ ಆತುರಾತುರವಾಗಿ ಹೊರಡುವುದರಲ್ಲಿದ್ದ. ಗೌರಮ್ಮನವರು ಮುಂದೆ ಬಂದು ಅವನಿಗೆ ನಿಸೂರಿನಿಂದ ಸೂಚಿಸಿದರು:

"ಅಪ್ಪ, ಕೃಷ್ಣಸ್ವಾಮಿ, ದೂರದೇಶಕ್ಕೆ ಹೋಗುತ್ತ ಇದೀಯೆ. ಅತ್ತೆ ಮಾವಂದಿರಿಗೆ ನಮಸ್ಕಾರ ಮಾಡಿ ಅವರ ಆಶೀರ್ವಾದ ಪಡೆದು ಹೋಗಪ್ಪ."

'ಇದೇನು ಹಾಳು ಗೊಡ್ಡು ಸಂಪ್ರದಾಯವೋ' ಎಂದು ಮನಸ್ಸಿನಲ್ಲಿ ಬೇಸರಪಟ್ಟುಕೊಂಡು, ಕೃಷ್ಣಸ್ವಾಮಿ ಅತ್ತೆಮಾವಂದಿರಿಗೆ ನಮಸ್ಕಾರ ಮಾಡಿದ. ಅವರಿಬ್ಬರೂ ಅಳಿಯನಿಗೆ ಆಶೀರ್ವಾದ ಮಾಡುವಾಗ ಗದ್ಗದ ಅವರ ಕೊರಳನ್ನು ಕಟ್ಟಿತ್ತು. ಗೌರಮ್ಮನವರಿಗೂ ನಮಸ್ಕಾರ ಮಾಡಬೇಕೆಂದು ತೋರಿ, ಅವನು ಅವರಿಗೂ ನಮಸ್ಕಾರ ಮಾಡಿದ. ಅವರು—"ಬೇಗ ಮುನ್ಸೀಫನಾಗು. ಹತ್ತು ಮಕ್ಕಳ ತಂದೆಯಾಗು. ವೆಂಕಟಾಚಲಪತಿ ಒಳ್ಳೆಯದು ಮಾಡಲಿ" ಎಂದು ಬಾಯಿ ತುಂಬ ಹರಸಿದರು.

ನಾರಾಯಣಮೂರ್ತಿಗಳು ರಾಮಮೂರ್ತಿಯನ್ನೂ ರೈಲ್ವೆಸ್ಟೇಷನ್ನಿಗೆ ಹೋಗುವ ಹಾಗೆ ಹೇಳಿದರು. ಆದರೆ, ಕೃಷ್ಣಸ್ವಾಮಿ ಅವನು ಬರುವುದು ಅನಗತ್ಯವೆಂದೂ ಶಾಮಣ್ಣ ಸ್ಟೇಷನ್ನಿಗೆ ಬಂದಿರುತ್ತಾನೆಂದೂ ತಿಳಿಸಿ, ಗಾಡಿಯಲ್ಲಿ ಕುಳಿತು ಹೊರಟ.

ಶಾಮಣ್ಣ ಕೃಷ್ಣಸ್ವಾಮಿಯನ್ನು ಬೀಳ್ಕೊಳ್ಳಲು ಸ್ಟೇಷನ್ನಿಗೆ ಬಂದಿದ್ದ. ರೈಲು ಹೊರಡಲು ಎರಡು ಮೂರು ನಿಮಿಷಗಳು ಮಾತ್ರ ಇದ್ದುವು.

ಇಬ್ಬರೂ ಹೆಚ್ಚು ಮಾತಾಡಲು ವೇಳೆಯೇ ಇರಲಿಲ್ಲ. ಶಾಮಣ್ಣ ರೈಲಿನ ಪಕ್ಕದಲ್ಲಿಯೇ ನಿಂತಿದ್ದ; ಕೃಷ್ಣಸ್ವಾಮಿ ರೈಲಿನ ಕಿಟಕಿಯ ಹೊರಕ್ಕೆ ತಲೆ ಹಾಕಿಕೊಂಡು ಅವನೊಡನೆ ಮಾತಾಡುತ್ತ ಹೀಗೆ ಕೇಳಿಕೊಂಡ:

"ಶಾಮಣ್ಣ, ಈಗ ಹೇಗೂ ನಮ್ಮ ಮಾವನವರ ಹೆಚ್ಚಿನ ಪರಿಚಯ ಆದಹಾಗೆ ಆಗಿದೆ. ನನಗೋಸ್ಕರ ಅವರ ಮನೆಗೆ ಹೋಗಿ ಬರುತ್ತಿರು. ಅವಳದ್ದು ತುಂಬ ನಾಚಿಕೆಯ ಸ್ವಭಾವ. ಹೊತ್ತು ಕಳೆಯುವುದಕ್ಕೆ ತಮ್ಮಂದಿರಿಂದ ಕನ್ನಡ ಪುಸ್ತಕಗಳನ್ನು ತರಿಸಿಕೊಂಡು ಓದು ಅಂತ ಹೇಳಿದ್ದೇನೆ. ಕೇಳಿ ತರಿಸಿಕೊಂಡು ಓದಲು ಅವಳು ಸಂಕೋಚಪಡಬಹುದು. ನಿನಗೆ ಎಲ್ಲಾದರೂ ವೆಂಕಟಾಚಾರ್ಯರ ಕಾದಂಬರಿಗಳು ಸಿಕ್ಕಿದರೆ ಅವಳಿಗೆ ಓದಲು ತಂದುಕೊಟ್ಟಿದ್ದು ಬೇಕಾದರೆ ಹಿಂದಕ್ಕೆ ತೆಗೆದುಕೊಂಡುಹೋಗು"

"ಅಗತ್ಯವಾಗಿ ಆಗಲಿ" ಎಂದ ಶಾಮಣ್ಣ.

"ಇದನ್ನು ಹಿಡಿ."

"ಏನು?"

"ಕೈ ಹಿಡಿ, ಆಮೇಲೆ ಗೊತ್ತಾಗುತ್ತೆ."

ಶಾಮಣ್ಣ ಕೈ ಹಿಡಿದ. ಕೃಷ್ಣಸ್ವಾಮಿ ಅವನ ಕೈಗೆ ಹತ್ತು ರೂಪಾಯಿನ ನೋಟನ್ನು ಇಟ್ಟ.

"ಇದು ಯಾಕೆ?" ಎಂದು ಶಾಮಣ್ಣ ಕೇಳುತ್ತಿರುವಾಗಲೇ ರೈಲು ಸಿಳ್ಳು ಹಾಕಿತು; ಗಡಗಡಾಗಡ್ ಎಂದು ಚಕ್ರಗಳು ಚಲಿಸಿದುವು; ರೈಲು ಹೊರಟಿತು.

"ಅವಳಿಗೆ ಪುಸ್ತಕ ತಂದುಕೊಡುವುದಕ್ಕೆ."

"ಬೇಡ ಬೇಡ, ಹಾಗೆಯೇ ತಂದುಕೊಡುತ್ತೇನೆ" ಎಂದು ಶಾಮಣ್ಣ ನೋಟನ್ನು ಹಿಂದಿರುಗಿಸಲು ಪ್ರಯತ್ನಪಟ್ಟು ನಿಷ್ಫಲನಾದ. ಕೃಷ್ಣಸ್ವಾಮಿ ಬೇಡವೆಂದು ಸನ್ನೆ ಮಾಡಿದ; ರೈಲಿನ ವೇಗವೂ ಹೆಚ್ಚಿತು. ಶಾಮಣ್ಣ ಮೆಲ್ಲನೆ ಜೊತೆಗೂಡಿ ಓಡುತ್ತಿದ್ದ.

ರೈಲು ಓಡಲು ತೊಡಗಿದಾಗ, ಕೃಷ್ಣಸ್ವಾಮಿ ಗಟ್ಟಿಯಾಗಿ ಕೂಗಿ ಹೇಳಿದ:

"ನಾನು ಹೇಳಿದ ಹಾಗೆ ಮನೆಯ ಏರ್ಪಾಡು ಮಾಡುತ್ತಿ ತಾನೆ?"

"ಓಹೋ, ಅಗತ್ಯವಾಗಿ" ಎಂದು ಶಾಮಣ್ಣನೂ ಚೀರಿದ.

## ೧೦
## ಗಂಡಹೆಂಡಿರ ಔದಾರ್ಯ

ಶಾಮಣ್ಣ ಬೆಂಗಳೂರಿಗೆ ಹೋಗಿ ತನ್ನ ಮನೆಯ ಪಾತ್ರೆಪದಾರ್ಥ ಗಳನ್ನು (ಹೊಸದಾಗಿ ಹೂಡಿದ್ದ ಸಂಸಾರವಾದ್ದರಿಂದ ಅವು ಅಷ್ಟೇನೂ ಹೆಚ್ಚಾಗಿರಲಿಲ್ಲ) ತನ್ನ ಮಾವನವರ ಮನೆಗೆ ಸಾಗಿಸಲು ರೈಲುಚಾರ್ಜು, ಗಾಡಿಬಾಡಿಗೆ, ಕೂಲಿ ಇವುಗಳಿಗಾಗಿ ತಗಲುವ ವೆಚ್ಚವನ್ನು ಅವನು ವಹಿಸದಂತೆ ಮಾಡಬೇಕೆಂಬ ಉದ್ದೇಶದಿಂದ ಕೃಷ್ಣಸ್ವಾಮಿ ಅವನಿಗೆ ಹತ್ತು ರೂಪಾಯಿ ಕೊಟ್ಟದ್ದು. ಉದ್ದೇಶವನ್ನು ಸ್ಪಷ್ಟಪಡಿಸಿದರೆ ಹಣವನ್ನು ಎಲ್ಲಿ ಸ್ವೀಕರಿಸುವುದಿಲ್ಲವೋ ಎಂದು ಭಾವಿಸಿ, ತನ್ನ ಹೆಂಡತಿಗೆ ಕಾದಂಬರಿ ಗಳನ್ನು ತೆಗೆದುಕೊಡುವುದಕ್ಕಾಗಿ ಎಂದು ಹೇಳಿ ಕೃಷ್ಣಸ್ವಾಮಿ ಅವನ ಕೈಗೆ ಹಣವಿತ್ತನು.

ಶಾಮಣ್ಣ ಕೃಷ್ಣಸ್ವಾಮಿಗಿಂತ ಹೆಚ್ಚು ವ್ಯವಹಾರಜ್ಞ. ಕೃಷ್ಣಸ್ವಾಮಿ ಆ ಕಾರ್ಯವನ್ನು ತನಗೆ ವಹಿಸಿದ ಕೂಡಲೆ ಅವನು ತನ್ನ ಭಾವ ಚಂದ್ರ ಶೇಖರಯ್ಯನಿಗೆ ಒಂದು ಕಾಗದವನ್ನು ಕೂಡಲೆ ಬರೆದು ಹಾಕಿದನು. ಕೃಷ್ಣಸ್ವಾಮಿ ತಾನಿದ್ದ ಮನೆಯ ವಿಳಾಸವನ್ನು ಶಾಮಣ್ಣನಿಗೆ ಒಂದು ಚೀಟಿಯಲ್ಲಿ ಗುರುತುಹಾಕಿ ಕೊಟ್ಟಿದ್ದ ಶಾಮಣ್ಣ ಆ ವಿಳಾಸವನ್ನು ಚಂದ್ರಶೇಖರಯ್ಯನಿಗೆ ತಿಳಿಸಿ, ಕೃಷ್ಣಸ್ವಾಮಿ 'ಲಾ' ಪರೀಕ್ಷೆಗೆ ಓದಲು ಮದರಾಸಿಗೆ ಹೊರಟಿರುವುದಾಗಿಯೂ, ಅವನ ಮನೆಯ ಪಾತ್ರೆಪದಾರ್ಥ ಗಳನ್ನು ತೆಗೆದೊಯ್ಯುವ ಕೆಲಸವನ್ನು ತನಗೆ ವಹಿಸಿರುವುದಾಗಿಯೂ, ತಾನು ಸದ್ಯದಲ್ಲಿ ಬೆಂಗಳೂರಿಗೆ ಬರಲು ಬಿಡುವಿಲ್ಲದಿರುವದರಿಂದ ತನಗಾಗಿ ಆ ಕೆಲಸವನ್ನು ಆದಷ್ಟು ಕೂಡಲೆ ಚಂದ್ರಶೇಖರಯ್ಯ ಮಾಡಿಕೊಟ್ಟು ಉಪಕಾರ ಮಾಡಬೇಕೆಂದೂ, ವಿಳಂಬ ಮಾಡಿದರೆ ಅನಾವಶ್ಯಕವಾಗಿ ಖಾಲಿ ಮನೆಗೆ ಬಾಡಿಗೆ ಕೊಡಬೇಕಾಗುವುದೆಂದೂ ಕಾಗದದಲ್ಲಿ ವಿವರವಾಗಿ ಬರೆದು ತಿಳಿಸಿದ್ದನು; ಅಲ್ಲದೆ, ಕೃಷ್ಣಸ್ವಾಮಿ ಮೈಸೂರನ್ನು ಬಿಡುವ ದಿನ ಕಾಲಗಳನ್ನೂ ತಿಳಿಸಿ, ಧೈರ್ಯಮಾಡಿ ಬೀಗದಕೈಯನ್ನೂ ಕವರಿನಲ್ಲಿಯೇ ಇಟ್ಟು ಕಳಿಸಿದ್ದನು.

ಶಾಮಣ್ಣ ಬರೆದ ಕಾಗದವನ್ನು ಓದಿಕೊಂಡು ಚಂದ್ರಶೇಖರಯ್ಯನಿಗೆ ಸಂತೋಷವೇ ಆಯಿತು. ಕಾಗದದ ವಿಷಯವನ್ನು ರುಕ್ಮಿಣಿಗೆ ತಿಳಿಸಲು ಅವಳೂ ಸಂತೋಷಪಟ್ಟಳು. ಅವನು ಕಾಗದ ಬಂದ ಸಂಜೆಯೇ ಕಚೇರಿ ಬಿಟ್ಟವನು ನೇರವಾಗಿ ಕೃಷ್ಣಸ್ವಾಮಿ ಇದ್ದ ಮನೆಯನ್ನು ಹುಡುಕಿಕೊಂಡು ಹೊರಟನು. ವಿಳಾಸ ಸರಿಯಾಗಿ ಗೊತ್ತಿದ್ದರೆ ಬೆಂಗಳೂರಿನಲ್ಲಿ ಹೊಸ ಬರಿಗಾದರೂ ಮನೆಯನ್ನು ಗೊತ್ತು ಹಿಡಿಯುವುದು ಕಷ್ಟವಲ್ಲ. ಚಂದ್ರಶೇಖ ರಯ್ಯನಿಗೆ ಮನೆ ಬೇಗನೆಯೆ ಸಿಕ್ಕಿತು. ಮನೆಯ ಮಾಲಿಕರೂ ಆಗತಾನೆ ಕಚೇರಿಯಿಂದ ಬಂದು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಅವರು ಚಂದ್ರ ಶೇಖರ‍್ಯನ ಪರಿಚಯದವರೆ. ಚಂದ್ರಶೇಖರಯ್ಯ ಅವರಿಗೆ ಮನೆ ತೆರವು ಮಾಡುವ ಸಂಗತಿಯನ್ನು ತಿಳಿಸಿದ ಕೂಡಲೆ ಅವರು, "ಅಗತ್ಯವಾಗಿ ಆಗಬಹುದು. ಅವರು ಒಪ್ಪಂದದ ಪ್ರಕಾರ ನನಗೆ ಒಂದು ತಿಂಗಳ 'ನೋಟೀಸ್' ಕೊಡಬೇಕಾಗಿತ್ತು. ನಿಮಗೋಸ್ಕರ ಅದನ್ನು ನಾನು ಗಮ ನಿಸುವುದಿಲ್ಲ. ಆದರೆ, ಮೂರು ತಿಂಗಳ ಬಾಡಿಗೆ ಬಾಕಿ ಬರಬೇಕಾಗಿದೆ. ಅದನ್ನು ಬಿಡುವುದಕ್ಕೆ ಸಾಧ್ಯವಿಲ್ಲ ಬಾಕಿ ಕೊಟ್ಟು ಮನೆ ಖಾಲಿ ಮಾಡ ಬಹುದು" ಎಂದು ತಿಳಿಸಿದರು. "ಮುಂದಿನ ತಿಂಗಳು ಸಂಬಳ ಬಂದಕೂಡಲೆ ಬಾಕಿ ಹಣವನ್ನು ಕೊಡುತ್ತೇನೆ. ಈಗಲೆ ಮನೆ ಖಾಲಿ ಮಾಡಬಹುದೋ?" ಎಂದು ಚಂದ್ರಶೇಖರಯ್ಯ ಅವರನ್ನು ಕೇಳಿದ. "ನಿಮ್ಮಲ್ಲಿ ನನಗೆ ಅಷ್ಟು ನಂಬಿಕೆಯಿಲ್ಲವೆ? ಅಗತ್ಯವಾಗಿ ಆಗಬಹುದು" ಎಂದು ಮಾಲಿಕರು ಒಪ್ಪಿದರು. ಚಂದ್ರಶೇಖರಯ್ಯ ಕೂಡಲೆ ಎರಡು ಜಟಕಾ ಗಾಡಿಗಳನ್ನು ಗೊತ್ತುಮಾಡಿ ಕೊಂಡು ಬಂದು, ಮನೆಯವರಿಂದಲೇ ಮೂರು ಗೋಣಿಯ ಚೀಲಗಳನ್ನು ಎರವಲು ಪಡೆದು, ಅವುಗಳಲ್ಲಿ ಕೃಷ್ಣಸ್ವಾಮಿಯ ಸಂಸಾರದ ಪಾತ್ರೆಗಳು ಮುಂತಾದ ಸಾಮಾನುಗಳನ್ನೆಲ್ಲ ತುಂಬಿ ತನ್ನ ಮನೆಗೆ ಸಾಗಿಸಿ, ಮಾರನೆಯ ಬೆಳಗ್ಗೆಯೇ ಎರವಲು ತಂದಿದ್ದ ಗೋಣಿಯ ಚೀಲಗಳನ್ನು ಮನೆಯ ಮಾಲಿ ಕರಿಗೆ ಹಿಂದಿರುಗಿಸಿಬಿಟ್ಟನು.

ಇದು ನಡೆದದ್ದು ಬುಧವಾರದ ದಿನ; ಕೃಷ್ಣಸ್ವಾಮಿ ಮೈಸೂರನ್ನು ಬಿಡುವ ಹಿಂದಿನ ದಿನ. "ನಾನು ಹೇಳಿದ ಹಾಗೆ ಮನೆಯ ಏರ್ಪಾಡು

ಮಾಡುತ್ತಿ ತಾನೆ?" ಎಂದು ರೈಲಿನಲ್ಲಿ ಕುಳಿತು ಅವನು ಶಾಮಣ್ಣನನ್ನು ಪ್ರಶ್ನಿಸುವವೇಳೆಗೆ ಮನೆಯನ್ನು ಖಾಲಿ ಮಾಡಿಯಾಗಿತ್ತು!

ಚಂದ್ರಶೇಖರಯ್ಯ ಕೃಷ್ಣಸ್ವಾಮಿಯ ಮನೆಯ ಪದಾರ್ಥಗಳನ್ನೆಲ್ಲ ತಂದು ಇಟ್ಟುಕೊಂಡನಷ್ಟೆ. ಬುಧವಾರ ಬೆಳಗ್ಗೆ ಅವನು ಗೋಣಿಯ ಚೀಲಗಳನ್ನು ಮನೆಯವರಿಗೆ ಹಿಂದಿರುಗಿಸಿ, ಕಚೇರಿಗೆ ಹೊತ್ತಾಗಿದ್ದುದರಿಂದ ಬೇಗನೆ ಊಟಮಾಡಿಕೊಂಡು, ಕೋಣೆಯಲ್ಲಿ ಸಿಕ್ಕಾಬಟ್ಟೆ ಇಟ್ಟಾಡುತ್ತಿದ್ದ ಪದಾರ್ಥಗಳನ್ನೆಲ್ಲ ವಿಂಗಡಿಸಿ ಜೋಡಿಸಿ ಇಟ್ಟಿರಬೇಕೆಂದೂ ತಾನು ಕಚೇರಿಯಿಂದ ಹಿಂದಿರುಗುವಾಗ ಮೂರು ಗೋಣಿಯ ಚೀಲಗಳನ್ನು ಕೊಂಡು ತಂದು ಅವುಗಳಲ್ಲಿ ಸಾಮಾನುಗಳನ್ನೆಲ್ಲ ತುಂಬಿ ಭದ್ರಪಡಿಸುವುದಾಗಿಯೂ ತನ್ನ ಹೆಂಡತಿಗೆ ಹೇಳಿ, ಅವಸರದಲ್ಲಿ ಕಚೇರಿಗೆ ಹೊರಟುಹೋದನು.

ರುಕ್ಮಿಣಿ ಊಟಮಾಡಿಯಾದಮೇಲೆ ಸಾಮಾನುಗಳನ್ನು ಓರಣಗೊಳಿಸುವುದಕ್ಕೆ ತೊಡಗಿದಳು. ಕೃಷ್ಣಸ್ವಾಮಿಯೂ ಭಾಗ್ಯಲಕ್ಷ್ಮಿಯೂ ಹಿಂದೆ ಬಿಟ್ಟುಹೋಗಿದ್ದ ಕೆಲವು ಬಟ್ಟೆಬರೆಗಳನ್ನು ಮಡಿಸಿ ಗಂಟುಕಟ್ಟಿಟ್ಟಳು. ಸಾಮಾನುಗಳೊಂದಿಗೆ ಇದ್ದ ಒಂದೆರಡು ಪುಸ್ತಕಗಳ ಹಾಳೆಗಳು ತಿರಚಿಕೊಂಡಿದ್ದುವು. ಅವುಗಳ ದೂಳು ಕೊಡವಿ, ಹಾಳೆಗಳನ್ನು ಸರಿಪಡಿಸುತ್ತಿರುವಾಗ ಒಂದು ಅಂಚೆಯ ಕವರು ಕೆಳಕ್ಕೆ ಬಿದ್ದಿತು. ಅದರ ಮೇಲೆ ಪೂರ್ತಿ ವಿಳಾಸ ಬರೆದಿರಲಿಲ್ಲ, ಹೆಸರೊಂದು ಮಾತ್ರ ಬರೆದಿತ್ತು. ಅದನ್ನು ಮತ್ತೆ ಪುಸ್ತಕದೊಳಗೆ ಇಡಹೋಗುವಾಗ ಆ ಹೆಸರು ಅವಳ ಗಮನವನ್ನು ಸೆಳೆಯಿತು—ತನ್ನ ಹೆಸರೇ ಅದು! ಕೃಷ್ಣಸ್ವಾಮಿ ಸಂಸಾರ ಹೂಡಿದಮೇಲೆ ತನ್ನ ಹೆಂಡತಿಯನ್ನೂ ಕರೆದುಕೊಂಡು ತಮ್ಮ ಮನೆಗೆ ಬರುವಹಾಗೆ ರುಕ್ಮಿಣಿ ತನ್ನ ಗಂಡನಿಗೆ ಅನೇಕವೇಳೆ ಸೂಚಿಸಿದ್ದಳು. ಚಂದ್ರಶೇಖರಯ್ಯನ ಆಹ್ವಾನವನ್ನು ಕೃಷ್ಣಸ್ವಾಮಿ ಮನ್ನಿಸಿರಲಿಲ್ಲ, ಅಷ್ಟೆ. ಆದ್ದರಿಂದ, ಭಾಗ್ಯಲಕ್ಷ್ಮಿಯೇ ಏನಾದರೂ ತನಗೊಂದು ಕಾಗದ ಬರೆದಿಟ್ಟಿದ್ದು, ವಿಳಾಸ ಬರೆದು ಅಂಚೆಗೆ ಹಾಕುವುದಕ್ಕಾಗಿ ತನ್ನ ಗಂಡನ ಕೈಗೆ ಕೊಟ್ಟಿದ್ದಿರಬಹುದೆಂದು ಊಹಿಸಿ, 'ತನಗೆ ಬರೆದಿರುವ ಕಾಗದವನ್ನು ತಾನು ಓಗಿಕೊಂಡರೇನು ದೋಷ?' ಎಂಬ ಸಮಾಧಾನದಿಂದ ಕವರಿನಿಂದ ಕಾಗದವನ್ನು ತೆಗೆದು ಓದಿಕೊಂಡಳು. ಅವಳಿಗೆ ಆಶ್ಚರ್ಯವಾಯಿತು, ದಿಗಿಲಾಯಿತು!

ಕಾಗದ ಈ ರೀತಿ ಇದ್ದಿತು :

ಬೆಂಗಳೂರು,

ತಾ॥......................

ಪ್ರಿಯೆ ರುಕ್ಮಿಣಿ,

ನಿನ್ನನ್ನು ಪ್ರಿಯೆ ಎಂದು ಕರೆಯುತ್ತಿರುವುದಕ್ಕಾಗಿ ನೀನು ಕೋಪ ಗೊಳ್ಳಬಹುದು. ನಾನು ನಿನ್ನನ್ನು ಮತ್ತೆ ಏನೆಂದು ಕರೆಯಲಿ? ನೀನು ಚಂದ್ರಶೇಖರಯ್ಯನನ್ನು ಮದುವೆಯಾಗುವ ಮೊದಲು ನನ್ನ ಪ್ರಿಯೆ ಎನಿಸಿದ್ದೆ. ನೀನು ಎಂದೆಂದಿಗೂ ನನ್ನ ಪ್ರಿಯೆ.

ನನಗೇ ನಿನ್ನನ್ನು ಕೊಡಬೇಕೆಂದು ನಿನ್ನ ತಂದೆತಾಯಿ ಬಯಸಿದ್ದರು. ಅವರಿಂದ ನಾನು ಬಹಳ ಉಪಕಾರ ಹೊಂದಿದ್ದೇನೆ. ನಿನ್ನನ್ನು ಮದುವೆ ಯಾಗಲೊಪ್ಪಿ ಅವರಿಗೆ ನನ್ನ ಕೃತಜ್ಞತೆಯನ್ನು ತೋರಿಸಬಹುದಾಗಿತ್ತು. ಈ ವಿಷಯದಲ್ಲಿ ನನ್ನ ತಪ್ಪು ಎಷ್ಟು ಇದೆಯೋ ನನ್ನ ಮಾವನ—ಅಂದರೆ, ನಿನ್ನ ತಂದೆಯ ತಪ್ಪೂ ಅಷ್ಟೇ ಇದೆ. ನಾನು ಬಿ. ಎ. ಪ್ಯಾಸುಮಾಡುವ ವರೆಗೂ ನಿನ್ನನ್ನು ಮದುವೆಯಾಗುವುದಿಲ್ಲ ಎಂದೆನೇ ಹೊರತು, ನಿನ್ನನ್ನು ಮದುವೆಯೇ ಆಗುವುದಿಲ್ಲ ಎಂದು ನಾನು ಹೇಳಲಿಲ್ಲ. ಮಾವ ದುಡುಕಿ ನಿನ್ನನ್ನು ಬೇರೆಯ ವರನಿಗೆ ಕೊಟ್ಟರು ಆಗ ನನ್ನ ಮನಸ್ಸಿಗೆ ಆದ ದುಃಖ ಅಷ್ಟಿಷ್ಟಲ್ಲ.

ನಾನು ಮುಂದಕ್ಕೆ ಓದುವ ಆಸೆಯಿಂದ ಆಸ್ತಿವಂತರಾದ ನಾರಾಯಣ ಮೂರ್ತಿಗಳ ಮಗಳನ್ನು ಮದುವೆಯಾದೆ. ಅವಳು ಕುರೂಪಿಯೇನಲ್ಲ. ಆದರೂ, ನಿನ್ನಷ್ಟು ಚೆಲುವೆಯಲ್ಲ. ಅವಳಿಗೆ ನನ್ನಲ್ಲಿ ತುಂಬ ಭಕ್ತಿಯಿದೆ. ಪ್ರೀತಿಯೂ ಇರಬಹುದು. ಆದರೆ, ಪ್ರೀತಿಯನ್ನು ತೋರಿಸುವ ರೀತಿ ಮಾತ್ರ ಅವಳಿಗೆ ತಿಳಿಯದು. ಅವಳಿಗೆ ನನ್ನಲ್ಲಿ ಎಷ್ಟು ಪ್ರೀತಿ ಇದ್ದರೇನು? ನನ್ನ ಪ್ರೀತಿಯೆಲ್ಲ ನಿನಗೇ ಮೀಸಲಾಗಿದೆ.

ಅವಳೊಂದಿಗೆ ಸಂಸಾರ ಹೂಡಿದ ಮೇಲಂತೂ ನನಗೆ ನಿನ್ನ ನೆನಪು ಹೆಚ್ಚಾಗುತ್ತ ಬಂದಿತು. ನನ್ನ ಭಾಗದ ದುರ್ದೈವ ನನ್ನನ್ನು ನಿನ್ನ ಯಜಮಾನರ ಕೈಕೆಳಗೇ ಕೆಲಸ ಮಾಡುವ ಹಾಗೆ ಮಾಡಿತು. ಹಾಗಿಲ್ಲದೆ

ಹೋಗಿದ್ದಿದ್ದರೆ, ನಾನು ಹೆಚ್ಚು ಸಲಿಗೆ ವಹಿಸಿ ಪದೇಪದೇ ನಿಮ್ಮ ಮನೆಗೆ ಬಂದು, ನಿನ್ನನ್ನು ನೋಡುತ್ತ ನಿನ್ನೊಡನೆ ಸಂತೋಷವಾಗಿ ಎರಡು ಮಾತಾಡಿ ತೃಪ್ತಿಪಡಬಹುದಾಗಿತ್ತು. ಹಾಗೂ, ಧೈರ್ಯಮಾಡಿ ಎರಡು ಮೂರು ಸಲ ನಿಮ್ಮ ಮನೆಗೆ ಬಂದಿದ್ದೆ. ನೀನೇನೋ ನನ್ನನ್ನು ಆದರದಿಂದಲೇ ಕಾಣುತ್ತಿದ್ದೆ. ಈ ಕಾಗದದಲ್ಲಿ ಬರೆದಿರುವ ನನ್ನ ಪ್ರೀತಿಯ ವಿಷಯವನ್ನು ಮುಖತಃ ನಿನಗೆ ತಿಳಿಸಲು ಅದೇಕೋ ನನ್ನ ಬಾಯಿ ಕಟ್ಟಿಹೋಗುತ್ತಿತ್ತು. ನೀನು ನನ್ನೊಡನೆ ಸಲಿಗೆಯಿಂದಲೇ ನಡೆದುಕೊಳ್ಳುತ್ತಿದ್ದರೂ, ನಾವು ಗಂಡ ಹೆಂಡಿರಾಗಬೇಕಾಗಿದ್ದವರು ಎಂಬ ಪೂರ್ವದ ಸಂಗತಿಯನ್ನು ನೀನು ಸಂಪೂರ್ಣವಾಗಿ ಮರೆತುಬಿಟ್ಟದ್ದೀಯೆಂದೇ ನಾನು ತಿಳಿದೆ. ನಿನ್ನ ಗಂಡ ನಿಲ್ಲದ ವೇಳೆಯಲ್ಲಿ ನಿಮ್ಮ ಮನೆಗೆ ಬರುವುದು ನನಗೂ ಸರಿ ಕಾಣಲಿಲ್ಲ. ಅಲ್ಲದೆ, ನಿನ್ನ ಗಂಡನೂ ಕೂಡ 'ನಾನು ಮನೆಯಲ್ಲಿರುವಾಗ ಬಾ' ಎಂದು ಕರೆದ. 'ನಾನು ಮನೆಯಲ್ಲಿ ಇಲ್ಲದ ವೇಳೆಯಲ್ಲಿ ನೀನು ಬರಕೂಡದು' ಎಂದು ತಾನೆ ಅವನ ಮಾತಿನ ಅಭಿಪ್ರಾಯ? ಅಂದಿಗಿಂದ ನಾನು ನಿಮ್ಮ ಮನೆಗೆ ಸುಳಿಯುವುವನ್ನೇ ಬಿಟ್ಟೆ; ಸುಳಿಯುವುದಿಲ್ಲವೆಂದು ಶಪಥ ಮಾಡಿಕೊಂಡೆ.

ಆದರೂ, ನಿನ್ನನ್ನು ಮರೆಯಲು ಸಾಧ್ಯವಿಲ್ಲ. ನೀನು ನನ್ನೊಡನೆ ಬಾಳುವೆ ಮಾಡಬೇಕೆಂದು ಬಯಸುವಷ್ಟು ದಡ್ಡನೂ ಅಲ್ಲ, ದುಷ್ಟನೂ ಅಲ್ಲ. ಆದರೂ ನೀನು ನನ್ನವಳಾಗದಿರುವುದು ನನ್ನ ಹೊಟ್ಟೆಯಲ್ಲಿ ಆರಿಸ ಲಾಗದಂಥ ಬೆಂಕಿಯನ್ನು ಹೊತ್ತಿಸಿದೆ.

ನನ್ನ ದುರ್ದೈವ ನನ್ನನ್ನೂ ನಿನ್ನನ್ನೂ ಅಗಲಿಸಿ, ನಾವಿಬ್ಬರೂ ಒಂದೇ ಊರಿನಲ್ಲಿ ಬೇರೆ ಇರುವಂತೆ ಮಾಡಿದೆ. ಇದನ್ನು ಸಹಿಸಲಾರೆ ಕೆಲವು ಕಾಲವಾದರೂ ಬೆಂಗಳೂರನ್ನು ಬಿಟ್ಟುಹೋಗೋಣವೆಂದರೆ, ಕಚೇರಿಯ ಕೆಲಸ ಕುತ್ತಿಗೆಗೆ ಕಟ್ಟಿದೆ. ಕಚೇರಿಯ ಕೆಲಸದಲ್ಲೂ ನನಗೆ ಉತ್ಸಾಹವಿಲ್ಲ. ಆ ಬಗ್ಗೆ ಹೆಚ್ಚು ವಿವರಿಸಲು ನನಗೆ ಇಷ್ಟವಿಲ್ಲ. ಅಂತೂ, ಕೆಲವು ಕಾಲದ ಮಟ್ಟಿಗಾದರೂ ಬೆಂಗಳೂರನ್ನು ಬಿಟ್ಟುಹೋದರೆ ನಿನ್ನನ್ನು ಮರೆಯಲು ಸಾಧ್ಯವಾದೀತೇನೋ.

ನೀನು ನಿನ್ನ ಗಂಡನಿಗೆ ದ್ರೋಹಮಾಡಬೇಕೆಂದು ನಾನು ಬಯಸುವುದಿಲ್ಲ. ನಾನು ನಿನ್ನಲ್ಲಿ ಇಟ್ಟಿರುವ ಪ್ರೀತಿಗೆ ಬದಲಾಗಿ ನೀನೂ ನನ್ನನ್ನು ಅದೇ ರೀತಿ ಪ್ರೀತಿಸು ಎಂದೂ ಕೇಳಿಕೊಳ್ಳುವುದಿಲ್ಲ. ನಮ್ಮಿಬ್ಬರ ಹಿಂದಿನ ಪ್ರೀತಿಯನ್ನು ನಾನು ಮರೆತಿಲ್ಲ ಎಂದು ನೀನು ನನಗೆ ತಿಳಿಸಿದರೆ ನನ್ನ ನೊಂದ ಹೃದಯಕ್ಕೆ ಎಷ್ಟೋ ಸಮಾಧಾನವಾಗುತ್ತದೆ; ನೀನು ನನ್ನನ್ನು ಪ್ರೀತಿಸುವುದಕ್ಕಿಂತ ಹೆಚ್ಚೆಂದು ತಿಳಿಯುತ್ತೇನೆ. ಅಷ್ಟು ಉಪಕಾರ ಮಾಡುವಿಯಾ?

ನನ್ನ ಈ ದೀರ್ಘಪತ್ರಕ್ಕೆ ನಾನು ನಿನ್ನಿಂದ ಬಯಸುವುದು ಎರಡೇ ಮಾತಿನ ಉತ್ತರ—"ನಿನ್ನ ಪ್ರೀತಿಯನ್ನು ನಾನು ಮರೆತಿಲ್ಲ" ಎಂದು.

ಉತ್ತರಕ್ಕಾಗಿ ನನ್ನ ವಿಳಾಸ ಬರೆದ ಅಂಚೆಯ ಕವರನ್ನು ಇದರೊಂದಿಗೆ ಇಟ್ಟಿದ್ದೇನೆ.

ಸರ್ವದಾ ನಿನ್ನ ಸ್ಮರಣೆಯಲ್ಲಿರುವ,
ಕೃಷ್ಣಸ್ವಾಮಿ.

ಪತ್ರವನ್ನೋದಿಕೊಂಡು ರುಕ್ಮಿಣಿಗೆ ಮೊದಲು ಆಶ್ಚರ್ಯವಾಯಿತು; ಈ ಕಾಗದ ತನ್ನ ಕೈಗೆ ಸಿಕ್ಕುವ ಬದಲು ತನ್ನ ಯಜಮಾನರ ಕೈಗೆ ಸಿಕ್ಕಿದ್ದರೆ ಕೃಷ್ಣಸ್ವಾಮಿಯ ವಿಚಾರದಲ್ಲಿಯೂ ತನ್ನ ವಿಚಾರದಲ್ಲಿಯೂ ಅವರು ಏನೇನು ಇಲ್ಲದ ಸಲ್ಲದ ಭಾವನೆಗಳನ್ನಿಟ್ಟುಕೊಂಡು ತಮ್ಮ ಅನ್ಯೋನ್ಯ ಪ್ರೇಮಕ್ಕೆ ಎಲ್ಲಿ ಭಂಗಬರುತ್ತಿದ್ದಿತೋ ಎಂದು ದಿಗಿಲುಗೊಂಡಳು. ಈ ಒಲ್ಲದ ಗಂಡನನ್ನು ಕಟ್ಟಿಕೊಂಡು ಭಾಗ್ಯಲಕ್ಷ್ಮಿ ಮುಂದೆ ಏನೇನು ಬವಣೆ ಪಡಬೇಕಾದೀತೋ ಎಂದು ಅವಳಿಗಾಗಿ ಪರಿತಪಿಸಿದಳು. 'ಅಯ್ಯೋ ಪಾಪ, ನನ್ನ ಗೀಳು ಹಚ್ಚಿಕೊಂಡು ಇವನು ಯಾಕೆ ಹೀಗೆ ಕೊರಗುತ್ತಾನೆ? ಭಾಗ್ಯಲಕ್ಷ್ಮಿ ಎಂಥ ಮುತ್ತಿನಂಥ ಹುಡುಗಿ!' ಎಂದು ಅವನ ಬಗೆಗೂ ಕನಿಕರಪಟ್ಟಳು.

ಅಂತೂ, ಕೃಷ್ಣಸ್ವಾಮಿ ಮದರಾಸಿಗೆ ಹೊರಟದ್ದಕ್ಕೆ ಎಲ್ಲರಿಗೂ ಗೊತ್ತಿರದಿದ್ದ ಒಂದು ಹೆಚ್ಚಿನ ಕಾರಣವನ್ನು ರುಕ್ಮಿಣಿ ಅರಿತುಕೊಂಡಳು.

ಆ ಕಾಗದ ಹಾಗೆಯೇ ಉಳಿದುಕೊಂಡರೆ ಮುಂದೆ ಯಾರಿಗೆ ಯಾವ ವಿಪತ್ತಿಗೆ ಕಾರಣವಾದೀತೋ ಎಂದು ಅವಳಿಗೆ ಶಂಕೆಯಾಯಿತು. ಅಲ್ಲದೆ,

ಅಂಚೆಗೆ ಹಾಕದ ಕಾಗದ; ತನಗೇ ಬರೆದದ್ದಾದರೂ ತನ್ನ ಕೈಸೇರದೆ ಈಗ ಅದು ಹೇಗೊ ಕೈಗೆ ಸಿಕ್ಕಿದ ಕಾಗದ. ಅದು ತನ್ನ ಬಳಿ ಇರತಕ್ಕದ್ದಲ್ಲ, ಇರಕೂಡದು. ಇನ್ನು ಯಾರ ಕೈಗಾದರೂ ಬೀಳಲೂ ಕೂಡದು ಇಷ್ಟಕ್ಕೂ ಕೃಷ್ಣಸ್ವಾಮಿ ಹೊರಗಿನವನೂ ಅಲ್ಲ. ತನ್ನ ಮಾನ ಕಾಯ್ದುಕೊಳ್ಳುವಂತೆ ಅವನ ಮಾನ ಕಾಯುವುದೂ ತನ್ನ ಕರ್ತವ್ಯ

ರುಕ್ಮಿಣಿ ಹೀಗೆ ಆಲೋಚಿಸಿ, ಮಧ್ಯಾಹ್ನ ಕಾಫಿ ಕಾಯಿಸಲು ಅಗ್ಗಿಷ್ಟಿಕೆಯಲ್ಲಿ ಕೆಂಡ ಮಾಡಬೇಕಾದಾಗ, ಆ ಕಾಗದವನ್ನೆ ಹೊತ್ತಿಸಿ ಕೆಂಡ ಮಾಡಿದಳು. ಅವಳ ಮನಸ್ಸಿಗೆ ಹಗುರವೆನಿಸಿತು.

ಮಾರನೆಯ ಶುಕ್ರವಾರ ಬೆಳಗ್ಗೆ ಮದರಾಸು ರೈಲು ಹೊರಡುವ ವೇಳೆಗೆ ಸರಿಯಾಗಿ ಚಂದ್ರಶೇಖರಯ್ಯ ಮತ್ತು ರುಕ್ಮಿಣಿ ಇಬ್ಬರೂ ಕೃಷ್ಣಸ್ವಾಮಿಯನ್ನು ಬೀಳ್ಕೊಳ್ಳಲು ರೈಲ್ವೆ ಸ್ಟೇಷನ್ನಿಗೆ ಹೋಗಿದ್ದರು. ರೈಲು ಗಾಡಿ ಹೊರಡಲು ಸಿದ್ಧವಾಗಿ ನಿಂತಿದ್ದಿತು. ಕೃಷ್ಣಸ್ವಾಮಿ ಚಂದ್ರಶೇಖರಯ್ಯನ ಕಣ್ಣಿಗೆ ಬೀಳಲು ತಡವೇನಾಗಲಿಲ್ಲ.

"ಬಹಳ ಸಂತೋಷ ಕೃಷ್ಣಸ್ವಾಮಿ. ಲಾ ಕಾಲೇಜಿಗೆ ಸೇರಿಕೊಳ್ಳಲು ಮದರಾಸಿಗೆ ಹೊರಟಿದ್ದೀಯಂತೆ."

"ನಾನು ಈವೊತ್ತು ಹೊರಟಿರುವ ವಿಚಾರ ನಿಮಗೆ ಹೇಗೆ ತಿಳಿಯಿತು?"

ರುಕ್ಮಿಣಿ ಹೇಳಿದಳು: "ಶಾಮಣ್ಣ ಕಾಗದ ಬರೆದಿದ್ದ. ನಿಮ್ಮ ಮನೆಯನ್ನು ನಾಸ್ಯವಾದಾಗ ಖಾಲಿಮಾಡಿ, ಪಾತ್ರೆಗಳನ್ನೆಲ್ಲ ನಮ್ಮ ಮನೆಯಲ್ಲಿ ತಂದು ಇಟ್ಟುಕೊಂಡಿರುವ ಹಾಗೂ ತಿಳಿಸಿದ್ದ ಅವನು ಬೆಂಗಳೂರಿಗೆ ಬಂದಾಗ ಅವನ್ನೆಲ್ಲ ಮೈಸೂರಿಗೆ ತೆಗೆದುಕೊಂಡು ಹೋಗಿ ನಿಮ್ಮ ಮಾವನವರ ಮನೆಗೆ ತಲುಪಿಸುತ್ತಾನಂತೆ."

ಶಾಮಣ್ಣ ತನ್ನನ್ನು ಚಂದ್ರಶೇಖರಯ್ಯನ ಹಂಗಿಗೆ ಒಳಪಡುವ ಹಾಗೆ ಮಾಡಿದನಲ್ಲಾ ಎಂದು ಕೃಷ್ಣಸ್ವಾಮಿಯ ಮನಸ್ಸಿನಲ್ಲಿ ಶಾಮಣ್ಣನ ಮೇಲೆ ಕೋಪವುಂಟಾಯಿತು. ಆದರೆ ಅದನ್ನು ಹೊರಕ್ಕೆ ತೋರಗೊಡದೆ—

"ಒಳ್ಳೆಯ ಕೆಲಸ ಮಾಡಿದನಲ್ಲಾ! ನಾನು ಅವನಿಗೆ ಹೇಳಿದರೆ ಅವನು ನಿಮಗೆ ಹೇಳುವುದೆ? ಚೆನ್ನಾಯಿತು. ನಾನು ಅವನಿಗೆ ಮತ್ತೆ

ಬರೆಯುತ್ತೇನೆ. ದಯವಿಟ್ಟು ನೀವೇನೂ ತೊಂದರೆ ತೆಗೆದುಕೊಳ್ಳಬೇಡಿ."
ಎಂದಿಷ್ಟೆ ಹೇಳಿದ.

"ಅನ್ಯಾಯವಾಗಿ ಖಾಲಿಮನೆಗೆ ಬಾಡಿಗೆ ಕೊಡಬೇಕಾಗುತ್ತದೆಯಲ್ಲ ಅಂತ ಅವರು ಹೋಗಿ ಮೊನ್ನೆಯೇ ಮನೆಯನ್ನು ತೆರವು ಮಾಡಿಕೊಟ್ಟು ಬಂದರು."

"ಬೀಗದ ಕೈಯೊ?"

"ಶಾಮಣ್ಣ ಅದನ್ನು ಕವರಿನಲ್ಲೆ ಇಟ್ಟು ಕಳಿಸಿದ್ದ."

ಕೊನೆಗೂ ತನಗೆ ಇಷ್ಟವಿಲ್ಲದ ಕಾರ್ಯ ನಡೆದೇ ಹೋಗಿದ್ದುದಕ್ಕಾಗಿ ಕೃಷ್ಣಸ್ವಾಮಿ ವಿಷಾದಪಟ್ಟ. ಚಂದ್ರಶೇಖರಯ್ಯನ ಈ ಉಪಕಾರಕ್ಕಾಗಿ ಮನಸ್ಸಿನಲ್ಲಿ ನಿಜವಾದ ಕೃತಜ್ಞತಾಭಾವ ಮೂಡದಿದ್ದರೂ, ಕೃಷ್ಣಸ್ವಾಮಿ ಯತ್ನವಿಲ್ಲದೆ ಎರಡು ಉಪಚಾರದ ಮಾತುಗಳನ್ನಾಡಬೇಕಾಗಿ ಬಂದಿತು:

"ಚಂದ್ರಶೇಖರಯ್ಯ, ಶಾಮಣ್ಣ ಅನಾವಶ್ಯಕವಾಗಿ ನನಗೋಸ್ಕರ ನಿಮಗೆ ತೊಂದರೆ ಕೊಟ್ಟ. ದಯವಿಟ್ಟು ಕ್ಷಮಿಸಬೇಕು."

"ಇದೇನು ಕೃಷ್ಣಸ್ವಾಮಿ ಹೀಗೆ ಹೇಳುತ್ತಿ! ಶಾಮಣ್ಣ ಬರೆಯದೆ ನೀನೇ ಬರೆದಿದ್ದರೂ ಈ ಕೆಲಸ ಮಾಡುತ್ತಿದ್ದೆ. ನೀನೇನು ಹೊರಗಿನವನೆ? ಸಮಯ ಅಂದರೆ ಒಬ್ಬರಿಗೊಬ್ಬರು ಇಷ್ಟು ಉಪಕಾರವನ್ನೂ ಮಾಡದೆ ಹೋದರೆ ಹುಟ್ಟಿದ್ದಕ್ಕೆ ಸಾರ್ಥಕವೇನು? ಹೀಗೆಲ್ಲ ಹೇಳಬೇಡ ಅಪ್ಪ. ರಜದಲ್ಲಿ ಮೈಸೂರಿಗೆ ಹಿಂದಿರುಗುವಾಗ ನೀನು ನಮ್ಮ ಮನೆಯಲ್ಲಿ ಒಂದೆರಡು ದಿನ ಇದ್ದು ಹೋಗಬೇಕಪ್ಪ" ಎಂದು ಅಂತಃಕರಣಪೂರ್ವಕವಾಗಿ ನುಡಿದ ಚಂದ್ರಶೇಖರಯ್ಯ.

"ಉಪ್ಪಿಟ್ಟು ಆರಿಹೋಗುತ್ತೆ" ಎಂದು ನೆನಪುಕೊಟ್ಟಳು ರುಕ್ಮಿಣಿ. ಚಂದ್ರಶೇಖರಯ್ಯ "ಮದರಾಸು ತಲಪುವ ಹೊತ್ತಿಗೆ ತುಂಬ ಹೊತ್ತಾಗುತ್ತೆ. ಸ್ವಲ್ಪ ಉಪ್ಪಿಟ್ಟು ಕಾಫಿ ತೆಗೆದುಕೊ" ಎಂದು ಹೇಳಿ, ಉಪ್ಪಿಟ್ಟು ತುಂಬಿದ್ದ ಡಬ್ಬಿಯನ್ನೂ ಕಾಫಿಯಿದ್ದ ಥರ್ಮೊಸ್ ಫ್ಲಾಸ್ಕನ್ನೂ ಕೃಷ್ಣಸ್ವಾಮಿಗೆ ಕೊಟ್ಟ. ಕೃಷ್ಣಸ್ವಾಮಿ ಸ್ವಲ್ಪ ಹೊತ್ತಿಗೆ ಮುಂಚೆ ಹೋಟಲಿನಲ್ಲಿ ಉಪಾಹಾರವನ್ನು ತೆಗೆದುಕೊಂಡಿದ್ದನು. ಆದ್ದರಿಂದ ತನಗೆ ಏನೂ

ಬೇಡವೆಂದನು. ಆದರೆ, ರುಕ್ಮಿಣಿಯ ವಿಶ್ವಾಸದ ಒತ್ತಾಯಕ್ಕೆ ಒಳಗಾಗಿ ಅವನು ಮತ್ತೆ ಉಪಾಹಾರವನ್ನು ತೆಗೆದುಕೊಳ್ಳಬೇಕಾಯಿತು.

ಉಪಾಹಾರವನ್ನು ತೆಗೆದುಕೊಳ್ಳುತ್ತ, "ರುಕ್ಮಿಣಿಗೆ ನನ್ನಲ್ಲಿ ನಿಜವಾದ ವಿಶ್ವಾಸವಿದೆ. ಇಲ್ಲದೆ ಹೋಗಿದ್ದರೆ ಇಷ್ಟೆಲ್ಲ ತೊಂದರೆ ಏಕೆ ತೆಗೆದು ಕೊಳ್ಳುತ್ತಿದ್ದಳು? ನನ್ನನ್ನು ಬೀಳ್ಕೊಳ್ಳಲು ಒಬ್ಬಳೇ ಬರಲು ಸಾಧ್ಯವಿಲ್ಲ. ಆದ್ದರಿಂದ ಗಂಡನಿಗೆ ಏನೋ ಮಂಕುಬೂದಿ ಎರಚಿ ಅವನನ್ನೂ ತನ್ನ ಸಂಗಡ ಕರೆದುಕೊಂಡು ಬಂದಿದ್ದಾಳೆ. ನಾನಾಗಿ ಇವಳನ್ನು ಕೈಬಿಟ್ಟು ಹೋದ ಹೋದೆ ಬಹುಶಃ ಅವಳೂ ಯತ್ನವಿಲ್ಲದೆ ಹೇಗೋ ಬಲಾತ್ಕಾರಕ್ಕೆ ಕಟ್ಟುಬಿದ್ದು ಅವನಲ್ಲಿ ವಿಶ್ವಾಸ ನಟಿಸುತ್ತ ಅವನೊಂದಿಗೆ ಸಂಸಾರ ಮಾಡುತ್ತಿದ್ದಾಳೆ ಎಂದು ಕಾಣುತ್ತೆ" ಎಂದು ಇಲ್ಲದ್ದನ್ನು ಊಹಿಸಿಕೊಂಡು ಅಷ್ಟರಲ್ಲಿ ಏನೋ ಒಂದು ವಿಧವಾದ ತೃಪ್ತಿಯನ್ನು ಹೊಂದಿದ. ರುಕ್ಮಿಣಿಯ ಉಪಚಾರದ ನಡೆನುಡಿಗಳಿಗೆ ಏನೋ ಒಂದು ಬಣ್ಣ ಕೊಟ್ಟು, ತನಗೆ ಬೇಕಾದ ಒಂದು ಕಲ್ಪನಾಚಿತ್ರವನ್ನು ಚಿತ್ರಿಸಿಕೊಂಡ. ಆ ಚಿತ್ರದಲ್ಲಿ ಚಂದ್ರಶೇಖರಯ್ಯನಿಗೆ ಎಡೆಯೇ ಇರಲಿಲ್ಲ.

## ೧೧
## ನಾರಾಯಣಮೂರ್ತಿಗಳ ಮನೆಯಲ್ಲಿ ಪರಿವರ್ತನೆ

ಕೃಷ್ಣಸ್ವಾಮಿ ತನ್ನ ಬಳಿ ಕೊಟ್ಟಿದ್ದ ಹತ್ತು ರೂಪಾಯಿಗಳಿಗೆ ಸುಲಭವಾಗಿ ದೊರೆತ ಎರಡು ವೆಂಕಟಾಚಾರ್ಯರ ಕಾದಂಬರಿಗಳನ್ನೂ ಬೇರೆಯ ಕೆಲವು ಕನ್ನಡ ಪುಸ್ತಕಗಳನ್ನೂ ಕೊಂಡು, ಅವುಗಳನ್ನೂ ತನ್ನ ಅಂಗಡಿಯಲ್ಲಿದ್ದ ಚರಕವನ್ನೂ ಶಾಮಣ್ಣ ಒಂದು ದಿನ ನಾರಾಯಣ ಮೂರ್ತಿಗಳ ಮನೆಗೆ ತೆಗೆದುಕೊಂಡು ಹೋದ. ರಾತ್ರಿ ಎಂಟು ಗಂಟೆಯ ಸಮಯವಾದ್ದರಿಂದ ನಾರಾಯಣಮೂರ್ತಿಗಳೂ ಮನೆಯಲ್ಲಿದ್ದರು. ಪುಸ್ತಕ ಗಳನ್ನೂ ಚರಕವನ್ನೂ ಭಾಗ್ಯಲಕ್ಷ್ಮಿಗಾಗಿ ಅವಳ ಗಂಡನ ಕೋರಿಕೆಯ ಮೇರೆಗೆ ತಾನು ತಂದಿರುವುದಾಗಿ ಶಾಮಣ್ಣ ತಿಳಿಸಲು ಅವರಿಗೆ ಆಶ್ಚರ್ಯ ವಾಯಿತು: "ತನ್ನ ಬದಲು ಇವಳು ನೂಲಲಿ ಎಂದು ಕೃಷ್ಣಸ್ವಾಮಿಯ

ಆಸೆಯೆ? ಕಡೆಗೂ ಅವನ ಮನಸ್ಸನ್ನು ನೀನು ಒಲಿಸಿಕೊಂಡುಬಿಟ್ಟೆ" ಎಂದರು ಅವರು. ಆಗ ಶಾಮಣ್ಣ ವಿವರಿಸಿದ: "ಕೃಷ್ಣಸ್ವಾಮಿ ಬರಿಯ ಪುಸ್ತಕಗಳನ್ನು ಮಾತ್ರ ಕೊಂಡುಕೊಡು ಅಂತ ಹೇಳಿದ್ದ. ಎಷ್ಟು ಅಂತ ಓದುವುದು? ಹೇಗಿದ್ದರೂ ಅವನು ಹಿಂದಿರುಗಲು ಎರಡು ವರ್ಷ ಬೇಕು. ಪ್ರಯೋಜನಕರವಾಗಿ ಹೊತ್ತು ಕಳೆಯಬೇಕಾದರೆ ಓದುವುದರ ಹಾಗೆ ಚರಕ ತಿರುಗಿಸುವುದೂ ಶ್ರೇಷ್ಠವಾದ ಉಪಾಯ. ಇದರಿಂದ ದೇಶಸೇವೆಯೂ ಆಗುತ್ತೆ. ನನ್ನದೂ ಒಂದು ಆಶೆಯಿದೆ: ಭಾಗ್ಯಲಕ್ಷ್ಮಿಯ ಮೂಲಕ ಚರಕದ ಗೀಳು ನಿಮ್ಮ ಮನೆಯವರೆಲ್ಲರಿಗೂ ಹಿಡಿದು, ಕೃಷ್ಣಸ್ವಾಮಿ ಹಿಂದಿರುಗುವ ಹೊತ್ತಿಗೆ ನೀವೆಲ್ಲಾ ಖಾದಿಧಾರಿಗಳಾಗಿ ಬಿಟ್ಟು, ಕಡೆಗೆ ಅವನೂ ಖಾದಿಧಾರಿಯಾಗಲಿ ಅಂತ. ಖಾದಿ ಧರಿಸುವುದೆ ತಡ, ದೇಶಸೇವೆಗೆ ದೀಕ್ಷೆ ವಹಿಸಿದ ಹಾಗೆಯೆ. ಅವನು ಹೇಗೂ ವಕೀಲನಾಗುತ್ತಾನಷ್ಟೆ. ವಕೀಲರೂ ವಿದ್ಯಾರ್ಥಿಗಳೂ ದೇಶಸೇವೆಗೆ ಸೊಂಟಕೊಟ್ಟು ಮುಂದೆ ಬರಬೇಕೆಂಬುದೇ ಗಾಂಧಿಯವರ ಬಯಕೆ. ಕೃಷ್ಣಸ್ವಾಮಿಯನ್ನು ದೇಶಸೇವೆಗೆ ಸೆಳೆಯಲು ಇದು ನಾನು ಹೂಡಿರುವ ಸಂಚು." ನಗುತ್ತ ನುಡಿದ ಶಾಮಣ್ಣನ ಮಾತುಗನ್ನು ಕೇಳಿ ಪರಿಹಾಸ್ಯಕ್ಕೆ ಹೀಗೆ ಹೇಳುತ್ತಿರುವನೆಂದು ನಾರಾಯಣ ಮೂರ್ತಿಗಳು ಭಾವಿಸಿದರು.

ಈ ನಡುವೆಯಲ್ಲಿ ಕೃಷ್ಣಸ್ವಾಮಿ ಮದರಾಸಿಗೆ ತಲಪಿದ ಕೂಡಲೆ ತನ್ನ ಮಾವನವರಿಗೆ ತಾನು ಸುರಕ್ಷಿತವಾಗಿ ತಲಪಿದ ಬಗ್ಗೆ ಒಂದು ಪತ್ರ ಬರೆದಿದ್ದ. ಎಂಟು ಹತ್ತು ದಿನಗಳಾದ ಮೇಲೆ ಅವನಿಂದ ಮತ್ತೊಂದು ಕಾಗದ ಬಂದಿತು; ಅದರಲ್ಲಿ, ತಾನು ಲಾ ಕಾಲೇಜಿಗೆ ಸೇರಿರುವುದಾಗಿ ಬರೆದು, ತಾನು ಉಳಿದುಕೊಂಡಿದ್ದ ಹೋಟಲು ವಿಳಾಸವನ್ನು ಕೊಟ್ಟು, ಕಳಿಸಬೇಕಾದ ಹಣವನ್ನು ಪ್ರತಿ ತಿಂಗಳೂ ಆ ವಿಳಾಸಕ್ಕೆ ತನಗೆ ಕಳಿಸಬೇಕೆಂದು ಪ್ರಾರ್ಥಿಸಿ, ಉಪಕಾರ ಸ್ಮರಣೆಯ ಎರಡು ವಾಕ್ಯಗಳನ್ನು ಸೇರಿಸಿ, ಮನೆಯವರೆಲ್ಲರ ಕ್ಷೇಮಕ್ಕೆ ಆಗಾಗ್ಗೆ ಬರೆಯುತ್ತಿರಬೇಕೆಂದು ಕೇಳಿಕೊಂಡಿದ್ದನು. ಭಾಗ್ಯಲಕ್ಷ್ಮಿಗೆ ಪ್ರತ್ಯೇಕವಾಗಿ ಏನೂ ಬರೆದಿರಲಿಲ್ಲ. ನಾರಾಯಣಮೂರ್ತಿಗಳು ಎರಡನೆಯ ಕಾಗದಕ್ಕೆ ಉತ್ತರ ಬರೆಯುವಾಗ

“ ನೀನು ಏನಾದರೂ ಬರೆದು ಕೊಡುತ್ತೀಯಾ ಅಮ್ಮಾ” ಎಂದು ಮಗಳನ್ನು ಕೇಳಿದರು. ಅವಳಿಗೇನೊ ಗಂಡನಿಗೆ ಒಂದು ಕಾಗದ ಬರೆಯಬೇಕೆಂಬ ಆಸೆ. ಏನು ಬರೆಯಬೇಕೆಂಬುದು ಮಾತ್ರ ತಿಳಿಯದು. ಅಲ್ಲದೆ, ಕೃಷ್ಣಸ್ವಾಮಿ ತನಗೆ ಪ್ರತ್ಯೇಕನಾಗಿ ಬರೆದೂ ಇಲ್ಲ. ಅವರಿಂದ ಒಂದು ಕಾಗದ ಬಂದಾಗ ಉತ್ತರ ಬರೆಯೋಣವೆಂದು ಅವಳು ಸುಮ್ಮನಾದಳು.

ಕನ್ನಡ ಪುಸ್ತಕಗಳು ಕೈಸೇರಿದ ಕೂಡಲೆ, ಭಾಗ್ಯಲಕ್ಷ್ಮಿ ಅಂದಿನ ರಾತ್ರಿಯೇ ವೆಂಕಟಾಚಾರ್ಯರ 'ದೇವೀಚೌಧುರಾಣಿ'ಯನ್ನು ಓದಲು ಮೊದಲು ಮಾಡಿದ್ದಳು ದಿನಪೂರ್ತಿನಲ್ಲಿ ಅದನ್ನು ಮುಗಿಸಿ, ಅವರದೇ ಇನ್ನೊಂದು ಕಾದಂಬರಿಯಾದ 'ವಿಷವೃಕ್ಷ'ವನ್ನು ಓದಿ ಮುಗಿಸಿದಳು. ಬಾಲ್ಯದಲ್ಲಿ ಅವಳ ಮನಸ್ಸಿನ ಮೇಲೆ ಅಚ್ಚೊತ್ತಿ ನೆಲಸಿದ್ದ ಸೀತೆ, ಸಾವಿತ್ರಿ, ದಮಯಂತಿ ಈ ಪುರಾಣವ್ಯಕ್ತಿಗಳೊಂದಿಗೆ 'ದೇವೀಚೌಧುರಾಣಿ'ಯ ಪ್ರಫುಲ್ಲೆಯೂ 'ವಿಷವೃಕ್ಷ'ದ ಸೂರ್ಯಮುಖಿಯೂ ಇವಳ ಆದರ್ಶ ಪತಿವ್ರತಾಶಿರೋಮಣಿಗಳಾಗಿ ಕಂಗೊಳಿಸಿದರು. ಪುರಾಣ ಪುಣ್ಯಕಥೆಗಳಂತೆ ಒಳ್ಳೆಯ ಕಾದಂಬರಿಗಳನ್ನು ಓದುವುದರಿಂದಲೂ ನೀತಿಯನ್ನು ಕಲಿತು ಶೀಲವನ್ನು ಉತ್ತಮಪಡಿಸಿಕೊಳ್ಳಬಹುದೆಂಬ ಅಂಶ ಸರಳವಾದ ಅವಳ ಮನಸ್ಸಿನಲ್ಲಿ ಮೂಡಿ ನೈಗೂಡಿತ್ತು. ರಾಮಮೂರ್ತಿಗೆ ಹೇಳಿ ಅವನ ಶಾಲೆಯಿಂದ ವೆಂಕಟಾಚಾರ್ಯರ ಇನ್ನು ಕೆಲವು ಕಾದಂಬರಿಗಳನ್ನು ತರಿಸಿಕೊಂಡು ಬೇಗ ಬೇಗನೆ ಓದಿ ಮುಗಿಸಿದಳು. ಗಳಗನಾಥರ 'ಕಮಲ ಕುಮಾರಿ' ಅವಳ ಮನಸ್ಸನ್ನು ಸೂರೆಗೊಂಡಿತು; ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾರಾಯ' ಅವಳನ್ನು ಮುಗ್ಧಳನ್ನಾಗಿ ಮಾಡಿ, ಅವಳು ಆ ಗ್ರಂಥವನ್ನು ತನ್ನ ತಾಯಿಗೂ ಗೌರತ್ತೆಗೂ ಗಟ್ಟಿಯಾಗಿ ಓದಿಹೇಳಿದಳು. ಈ ಪುಸ್ತಕ ವಾಚನದ ಪರಿಣಾಮವಾಗಿ, ಕೇವಲ ಸರಳವಾಗಿದ್ದ ಅವಳ ಮನಸ್ಸು ಸುಂದರವಾಗತೊಡಗಿತು, ಪರಿಪಕ್ವವಾಗತೊಡಗಿತು, ರಸಗ್ರಹಣ ಸಮರ್ಥವಾಯಿತು. ಇವಳ ವಾಚನದಾಹ ದಿನದಿನಕ್ಕೆ ಹೆಚ್ಚತೊಡಗಿತು; ಅದನ್ನು ಹಿಂಗಿಸಲು ರಾಮಮೂರ್ತಿಯ ಶಾಲೆಯ ಬಡ ಪುಸ್ತಕಭಂಡಾರಕ್ಕೆ ಸಾಧ್ಯವಾಗಲಿಲ್ಲ. ಒಂದು ದಿನ ರಾಮಮೂರ್ತಿ, “ಸರಿಸರಿ, ನೀನು ದಿನಕ್ಕೊಂದು ಕಾದಂಬರಿ ಕಥೆ ಓದಿ ಮುಗಿಸುತ್ತ ಬಂದರೆ ನಾನು ಹೇಗೆ

ನಿನಗೆ ಪುಸ್ತಕ ಒದಗಿಸಲಿ? ನಿನಗೆ ಕನ್ನಡ ಪುಸ್ತಕ ತಂದು ಒದಗಿಸುವುದರಲ್ಲಿ ನನಗೆ ಒಂದಾದರೂ ಇಂಗ್ಲಿಷು ಪುಸ್ತಕ ಪಡೆಯಲು ಅವಕಾಶವೇ ಆಗಿಲ್ಲ. ಪಾಪ, ಶಾಮಣ್ಣ ಅಷ್ಟು ವಿಶ್ವಾಸದಿಂದ ನಿನಗೆ ಚರಕ ತಂದುಕೊಟ್ಟಿದ್ದಲ್ಲದೆ ಎಂಟು ಹತ್ತು ದಿನ ಬಂದು ನಿನಗೆ ನೂಲುವುದನ್ನೂ ಕಲಿಸಿಕೊಟ್ಟು ಹೋಗಿದಾನೆ ಸ್ವಲ್ಪ ಚರಕದ ಮೇಲೂ ಕೈಯಾಡಿಸು" ಎಂದು ಗೊಣಗುತ್ತ ಹೇಳಿದ. ಅದೂ ಸರಿಯೆ ಎಂದು ಎಣಿಸಿ, ಭಾಗ್ಯಲಕ್ಷ್ಮಿ ಕೆಲವು ದಿನಗಳೊಳಗಾಗಿ ತಾನು ಎಣಿಸಿದ್ದಕ್ಕಿಂತ ಹೆಚ್ಚು ಕಾಲವನ್ನು ಚರಕದ ಮುಂದೆ ಕಳೆಯ ತೊಡಗಿದಳ. ಹೀಗಾಗಿ, ಕೆಲವು ತಿಂಗಳುಗಳಲ್ಲಿ ಅವಳು ಓದುವುದು ನೂಲುವುದು ಇವೆರಡು ಕೆಲಸಗಳನ್ನು ಬಿಟ್ಟು ಬೇರೆ ಇನ್ನೇನು ಕೆಲಸವನ್ನೂ ಮಾಡುತ್ತಿರಲಿಲ್ಲ. ಅವಳು ಮಾಡುತ್ತೇನೆಂದು ಎಷ್ಟು ಒತ್ತಾಯ ಮಾಡಿ ಬೇಡಿಕೊಂಡರೂ ಜಯಲಕ್ಷಮ್ಮನವರಾಗಲಿ ಅವಳ ಸೋದರತ್ತೆಯಾಗಲಿ ಅವಳನ್ನು ಯಾವ ಮನೆಗೆಲಸವನ್ನು ಮಾಡಲೂ ಹಾಯಗೊಡುತ್ತಿರಲಿಲ್ಲ.

ರಾಮಮೂರ್ತಿ ಅಂದು ಆಡಿದ್ದ ಮಾತು ನಾರಾಯಣಮೂರ್ತಿಗಳ ಕಿವಿಗೂ ಬಿದ್ದಿದ್ದಿತು ಅವರು ಮಗಳ ಸದ್ಗ್ರಂಥವಾಚನದ ಸದುದ್ದೇಶವು ಭಂಗವಾಗಬಾರದೆಂದು ಅಪೇಕ್ಷಿಸಿ, 'ಜಯಕರ್ನಾಟಕ', 'ಸದ್ಬೋಧ ಚಂದ್ರಿಕೆ', 'ವಿಶ್ವಕರ್ಣಾಟಕ', 'ತಾಯಿನಾಡು' ಇವುಗಳನ್ನು ಮನೆಗೆ ತರಿಸತೊಡಗಿದರು; ರಿಟೈರಾದಮೇಲೆ ತಮಗೂ ಉಪಯೋಗವಾಗುವುದೆಂಬ ಮುಂದಾಲೋಚನೆ ಯಿಂದ ಆಳಸಿಂಗರಾಚಾರ್ಯರ ರಾಮಾಯಣವನ್ನೂ ವಾಣೀವಿಲಾಸ ಭಾರತ ಭಾಗವತಗಳನ್ನೂ ಕೊಂಡು ತಂದು ಮನೆಯಲ್ಲಿಟ್ಟರು. ಭಾಗ್ಯಲಕ್ಷ್ಮಿ ಇವುಗಳ ಪ್ರಯೋಜನವನ್ನು ತಾನೂ ಪಡೆಯುತ್ತಿದ್ದುದಲ್ಲದೆ ತನ್ನ ತಾಯಿ ಮತ್ತು ಸೋದರತ್ತೆಗೂ ಒದಗಿಸುತ್ತಿದ್ದಳು. ಗೌರಮ್ಮನವರು, "ಭಾಗ್ಯಲಕ್ಷ್ಮಿ ಓದಿ ಹೇಳುವ ರಾಮಾಯಣ ಭಾರತಗಳೇ ಸಾಕು. ಇನ್ನು ಪುರಾಣ ಕೇಳಲು ಯಾಕೆ ಹೋಗಲಿ?" ಎಂದು ಪುರಾಣಕ್ಕೆ ಹೋಗುವುದನ್ನೇ ನಿಲ್ಲಿಸಿಬಿಟ್ಟರು.

ಭಾಗ್ಯಲಕ್ಷ್ಮಿಯಿಂದ ರಾಮಮೂರ್ತಿ ವೆಂಕಟೇಶಮೂರ್ತಿ ಇವರೂ ನೂಲು ತೆಗೆಯುವುದನ್ನು ಕಲಿತರು. ನೂತ ನೂಲನ್ನೆಲ್ಲ ತೆಗೆದುಕೊಂಡು ಹೋಗಿ ಅದರಿಂದ ಖಾದಿಯ ಬಟ್ಟೆ ನೇಯಿಸಿ ತರಿಸಿಕೊಡುವ ಹೊಣೆಯನ್ನು

ಶಾಮಣ್ಣನೇ ವಹಿಸಿಕೊಂಡಿದ್ದನು. ಅದಕ್ಕೆ ಮೊದಲೇ ಭಾಗ್ಯಲಕ್ಷ್ಮಿ ಖಾದಿ ಸೀರೆಯನ್ನು ತಾನು ಉಡುತ್ತಿದ್ದುದಲ್ಲದೆ, ತನ್ನ ತಾಯಿ ಮತ್ತು ಗೌರತ್ತೆ ಹೊರತಾಗಿ ಉಳಿದೆಲ್ಲರಿಗೂ ಖಾದಿಯನ್ನು ತೊಡಿಸಿದಳು ನಾರಾಯಣಮೂರ್ತಿಗಳ ಮನೆಯಲ್ಲಿ ಕಾಣಬಂದ ಈ ಪರಿವರ್ತನೆಯಿಂದ ಶಾಮಣ್ಣನಿಗೆ ಉಂಟಾದ ಹಿಗ್ಗು ಅಷ್ಟಿಷ್ಟಲ್ಲ. ಬರುಬರುತ್ತ ಅವನು ನಾರಾಯಣಮೂರ್ತಿಗಳ ಮನೆಯವರಲ್ಲಿ ಒಬ್ಬನಾಗಿಹೋದನು; ವಾರಕ್ಕೆ ಎರಡು ಮೂರು ದಿನಗಳಾದರೂ ಅವರ ಮನೆಗೆ ಅವನು ಬಂದುಹೋಗದೆ ಇರುತ್ತಿರಲಿಲ್ಲ. ಅವನು ಬಂದಾಗಲೆಲ್ಲಾ ಜಯಲಕ್ಷ್ಮಮ್ಮನವರು ಅವನಿಗೆ ಏನಾದರೂ ತಿಂಡಿಯನ್ನು ಕೊಟ್ಟೇ ಕೊಡುತ್ತಿದ್ದರು. ನಾರಾಯಣ ಮೂರ್ತಿಗಳ ಆದರಪೂರ್ವಕವಾದ ಒತ್ತಾಯಕ್ಕೆ ಕಟ್ಟುಬಿದ್ದು ಅವನು ವಾರದಲ್ಲಿ ಒಪ್ಪೊತ್ತಾದರೂ ಅವರ ಮನೆಯಲ್ಲಿ ಊಟಕ್ಕೆ ಏಳುತ್ತಿದ್ದನು. ಶಾಮಣ್ಣ ಭಾಗ್ಯಲಕ್ಷ್ಮಿ ಇವರಲ್ಲಿ ನಿರ್ಮಲವಾದ ಸೋದರಭಾವ ಬೆಳೆಯ ತೊಡಗಿತು. "ಪೂರ್ವಜನ್ಮದಲ್ಲಿ ನೀನು ನನ್ನ ಅಣ್ಣನಾಗಿದ್ದೆಯೋ ಏನೋ" ಎಂದು ಒಂದು ದಿನ ಭಾಗ್ಯಲಕ್ಷ್ಮಿ ಎಲ್ಲರೆದುರಿನಲ್ಲಿ ಹೇಳಿದಳು. "ನೀನು ಇಂದು ಹಾಗೆ ಹೇಳುತ್ತ ಇದ್ದೀಯೆ. ನಾನು ಎಂದಿನಿಂದಲೂ ನಿನ್ನನ್ನು ನನ್ನ ತಂಗಿಯೆಂದೇ ಭಾವಿಸಿದ್ದೇನೆ. ನನಗೆ ರುಕ್ಮಿಣಿ ಬೇರೆಯಲ್ಲ, ನೀನು ಬೇರೆಯಲ್ಲ" ಎಂದು ಅವನು ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿ ಹಿಗ್ಗಿದನು.

## ೧೨
## ಕಾಗದದ ಹಗರಣ

ರುಕ್ಮಿಣಿಯ ಹೆಸರನ್ನು ಎತ್ತಿ, ಅವಳ ಮನೆಯಲ್ಲಿ ಕೃಷ್ಣಸ್ವಾಮಿಯ ಸಂಸಾರದ ಪಾತ್ರೆಪದಾರ್ಥಗಳಿದ್ದುದು ಶಾಮಣ್ಣನ ನೆನಪಿಗೆ ಬಂದಿತು. ಕೃಷ್ಣಸ್ವಾಮಿ ಮದರಾಸಿಗೆ ಹೋದ ತರುಣದಲ್ಲಿಯೇ ಚಂದ್ರಶೇಖರಯ್ಯ ತಾನು ಅವನ ಸಾಮಾನುಗಳೆಲ್ಲವನ್ನೂ ತನ್ನ ಮನೆಯಲ್ಲಿ ತಂದು ಇರಿಸಿ ಕೊಂಡಿರುವುದಾಗಿಯೂ, ಬಿಡುವಾದಾಗ ಬಂದು ಅವುಗಳನ್ನು ಅವನ ಮಾವನವರ ಮನೆಗೆ ತೆಗೆದೊಯ್ಯಬೇಕೆಂದೂ ಶಾಮಣ್ಣನಿಗೆ ಕಾಗದ

ಬರೆದಿದ್ದನು. ಈ ಸಂಗತಿಯನ್ನು ಶಾಮಣ್ಣ ನಾರಾಯಣಮೂರ್ತಿಗಳಿಗೆ ತಿಳಿಸಿದಾಗ ಅವರು—"ನಿನಗೊಳ್ಳೆಯ ತೊಂದರೆ ಗಂಟು ಬಿದ್ದಿತಲ್ಲಪ್ಪಾ. ಹೋಗಲಿ ಬಿಡು. ಕ್ರಿಸ್‌ಮಸ್ ರಜದಲ್ಲಿ ರಾಮಮೂರ್ತಿಯನ್ನು ಕಳಿಸಿ ತರಿಸಿಕೊಳ್ಳುತ್ತೇನೆ" ಎಂದರು. "ಅದೇನು ಮಹಾ ತೊಂದರೆ, ಬಿಡಿ ಮಾವಯ್ಯ. ನಾನು ಅಂಗಡಿಗಾಗಿ ಸಾಮಾನು ತರಲು ಬೆಂಗಳೂರಿಗೆ ಹೋಗಬೇಕಾಗಿದೆ. ಆಗ ಜೊತೆಯಲ್ಲಿ ತಂದುಬಿಡುತ್ತೇನೆ" ಎಂದು ಅವನು ಆ ಕಾರ್ಯ ತನಗೆ ಹೊರೆಯಲ್ಲವೆಂಬಂತೆ ತಿಳಿಸಿದನು.

ಶಾಮಣ್ಣ ಬೆಂಗಳೂರಿಗೆ ಹೋಗಿ ಚಂದ್ರಶೇಖರಯ್ಯನ ಮನೆಯಲ್ಲಿ ಮೂರು ದಿನ ಇದ್ದನು. ಬಹುದಿನಗಳಾದ ಮೇಲೆ ಅಣ್ಣನನ್ನು ಕಂಡು ರುಕ್ಮಿಣಿ ಹಿಗ್ಗಿ ನಲಿದಳು; ಅವನನ್ನು ಪ್ರೇಮಾದರ ಸತ್ಕಾರಗಳ ಸಮುದ್ರದಲ್ಲಿ ಮುಳುಗಿಸಿಬಿಟ್ಟಳು.

ಎರಡನೆಯ ದಿನ ಸಂಜೆ ಚಂದ್ರಶೇಖರಯ್ಯ ಶಾಮಣ್ಣ ಇಬ್ಬರೂ ಗಾಳಿಯ ಸಂಚಾರಕ್ಕೆ ಹೊರಟು, ಲಾಲ್‌ಬಾಗಿನಲ್ಲಿ ಕುಳಿತು ವಿನೋದವಾಗಿ ಸಂಭಾಷಣೆ ನಡಸುತ್ತಿದ್ದರು. ಇದ್ದಕ್ಕಿದ್ದ ಹಾಗೇ ಚಂದ್ರಶೇಖರಯ್ಯನ ಮುಖ ಗಂಭೀರವಾಯಿತು.

"ಶಾಮಣ್ಣ, ನಿನ್ನಲ್ಲಿ ಒಂದು ವಿಚಾರ ಹೇಳಬೇಕಾಗಿದೆ. ಅದನ್ನು ಯಾರಿಗೂ ಹೇಳದೆ ಗೋಪ್ಯವಾಗಿಟ್ಟಿರುವುದಾಗಿ ಮಾತು ಕೊಟ್ಟರೆ ಹೇಳುತ್ತೇನೆ."

"ನನ್ನಲ್ಲಿಯೂ ನಿನಗೆ ಅಪನಂಬಿಕೆಯೆ ಭಾವ? ಅದೇನು, ಹೇಳು. ಯಾರಿಗೂ ಹೇಳುವುದಿಲ್ಲ."

"ಹೇಳುವುದೇನು? ಈ ಕಾಗದ ಓದಿಕೋ. ಎಲ್ಲ ನಿನಗೇ ಗೊತ್ತಾಗುತ್ತೆ" ಎಂದು ಚಂದ್ರಶೇಖರಯ್ಯ ತನ್ನ ಜೇಬಿನಿಂದ ಒಂದು ಕವರನ್ನು ತೆಗೆದು ಶಾಮಣ್ಣನ ಕೈಗೆ ಕೊಟ್ಟ.

ಶಾಮಣ್ಣ ಮೊದಲು ಮೇಲುವಿಳಾಸವನ್ನು ಗಮನಿಸಿದ: ಮೇಲೆ ರುಕ್ಮಿಣಿಯ ಹೆಸರಿತ್ತು; ಕೆಳಗೆ ಚಂದ್ರಶೇಖರಯ್ಯನ ಮನೆಯ ವಿಳಾಸವಿತ್ತು. ಕಾಗದವನ್ನು ತೆಗೆದು ಶಾಮಣ್ಣ ಓದಿಕೊಂಡ:

ಮದರಾಸು

ತಾ|| . ....... ...... ೧೯೩೯.

ನನ್ನ ಚಿರಪ್ರೇಮಪಾತ್ರಳಾದ ರುಕ್ಮಿಣಿ,

ನಾನು ಬೆಂಗಳೂರಿನಲ್ಲಿ ಇದ್ದಾಗ ನನ್ನ ಪ್ರೀತಿಯನ್ನು ನಿನಗೆ ತಿಳಿಸಿ, ನಿನ್ನ ಪ್ರೇಮವನ್ನು ಕೋರಿ, ನಿನಗೊಂದು ಕಾಗದ ಬರೆದಿದ್ದೆ. ಅದನ್ನು ಅಂಚೆಗೆ ಹಾಕುವುದೆಂದು ನಾನು ಓದುತ್ತಿದ್ದ ಒಂದು ಇಂಗ್ಲಿಷ್ ಪುಸ್ತಕದಲ್ಲಿ ಇಟ್ಟಿದ್ದೆ. ಕೆಲವು ದಿನ ಅಂಚೆಗೆ ಹಾಕುವ ವಿಷಯ ಮರೆತೇ ಹೋಯಿತು; ಆಮೇಲೆ ನಾನೇ ಮನಸ್ಸು ಬದಲಾಯಿಸಿ ಅದನ್ನು ಅಂಚೆಗೆ ಹಾಕದೆ ಅಲ್ಲಿಯೇ ಬಿಟ್ಟಿದ್ದೆ. ಚಂದ್ರಶೇಖರಯ್ಯ ಸ್ಟೇಷನ್ನಿನಲ್ಲಿ ನನ್ನ ಮನೆಯ ಸಾಮಾನುಗಳನ್ನೆಲ್ಲ ನಿಮ್ಮ ಮನೆಗೆ ಸಾಗಿಸಿರುವುದಾಗಿ ತಿಳಿಸಿದಾಗ ನನ್ನ ಎದೆ ಧಸಕ್ಕೆಂದಿತು. ಆ ಕಾಗದ ಅವನ ಕೈಗೆ ಸಿಕ್ಕಿಬಿಟ್ಟರೆ ನಿನಗೆ ತೊಂದರೆಯಾಗಬಹುದು. ಈ ಹೊತ್ತಿಗಾಗಲೇ ಅದು ಅವನ ಕೈ ಸೇರಿದ್ದರೆ, ನಾವು ಏನೂ ಮಾಡುವ ಹಾಗಿಲ್ಲ. ನೀನು ಒಂದು ಸಲ ಪುಸ್ತಕಗಳ ಹಾಳೆಗಳನ್ನೆಲ್ಲ ತೆರೆದು ನೋಡಿ, ಆ ಕಾಗದ ಸಿಕ್ಕಿದರೆ ಅದನ್ನು ಓದಿಕೊಂಡು ಸುಟ್ಟುಹಾಕಿಬಿಡು. ಏನಾದರೂ ಆಗಲಿ, ಆ ಕಾಗದದಲ್ಲಿ ಹೇಳಿರುವ ವಿಷಯ ಇಂದಿಗೂ ನತ್ಯ.

ಹೇಗೂ ಧೈರ್ಯಮಾಡಿ ಈ ಕಾಗದವನ್ನು ನಿನಗೆ ಬರೆದಿದ್ದೇನೆ. ನನ್ನಲ್ಲಿಯೂ ನಿನಗೆ ಪ್ರೀತಿಯಿದ್ದರೆ ಒಂದು ಪಂಕ್ತಿ ಉತ್ತರ ಬರಿ.

ನಿನ್ನ ಪ್ರೀತಿಯ
ಕೃಷ್ಣಸ್ವಾಮಿ.

ಶಾಮಣ್ಣ ಕೇಳಿದ: "ಈ ಕಾಗದ ಯಾವಾಗ ಬಂತು?"

"ಕೃಷ್ಣಸ್ವಾಮಿ ಮದರಾಸಿಗೆ ತಲಪಿದ ಎರಡು ಮೂರು ದಿನಗಳಲ್ಲಿಯೇ ಬಂತು."

"ರುಕ್ಮಿಣಿಗೆ ಈ ವಿಚಾರ ಗೊತ್ತಿಲ್ಲವೋ?"

"ಇಲ್ಲ."

"ಅವಳ ಹೆಸರಿಗೆ ಬರೆದಿದೆ, ರಿಜಿಸ್ಟರ್ಡ್ ಕವರು?"

"ಆ ಹೊತ್ತು ನಾನು ಕಚೇರಿಗೆ ತಡವಾಗಿ ಹೊದೆ ಲೇಟ್ ಪರ್ಮಿಷನ್ ತೆಗೆದುಕೊಂಡಿದ್ದೆ. ಪೋಸ್ಟ್‌ಮ್ಯಾನ್ ದಾರಿಯಲ್ಲಿ ಸಿಕ್ಕಿ, 'ನಿಮಗೊಂದು ರಿಜಿಸ್ಟರ್ಡ್ ಕವರ್ ಇದೆ ಸಾರ್' ಎಂದ. ನಾನು ವಿಳಾಸವನ್ನು ಓದದೆಯೇ ರಸೀತಿಗೆ ರುಜು ಹಾಕಿ ಕೊಟ್ಟುಬಿಟ್ಟೆ. ಕಚೇರಿಯಲ್ಲಿ ಒಡೆದು ನೋಡಿದರೆ, ಒಳಗೆ ಈ ಕಾಗದ. ಮಾರನೆಯ ದಿನ ಗೋಣಿಯ ಚೀಲಗಳಲ್ಲಿ ತುಂಬಿದ್ದ ಕೃಷ್ಣಸ್ವಾಮಿ ಸಾಮಾನುಗಳನ್ನೆಲ್ಲ ಹೊರಕ್ಕೆ ಸುರಿದು, ಸಿಕ್ಕಿದ ಐದಾರು ಪುಸ್ತಕಗಳ ಒಳಗೆಲ್ಲಾ ಚೆನ್ನಾಗಿ ಹುಡುಕಾಡಿ ನೋಡಿದೆ. ನಾನು ಹಾಗೆ ಹುಡುಕಾಡುತ್ತಿದ್ದುದನ್ನು ಕಂಡ ರುಕ್ಮಿಣಿ 'ಏನು ಹುಡುಕುತ್ತಿದ್ದೀರಲ್ಲಾ?' ಎಂದು ಕೇಳಿದಳು. ನಾನು ಸುಮ್ಮನೆ 'ಏನೂ ಇಲ್ಲ' ಎಂದು ಬಿಟ್ಟೆ. ಅಂತೂ, ಎಷ್ಟು ಹುಡುಕಿದರೂ ಆ ಹಾಳು ಕಾಗದ ಸಿಕ್ಕಲಿಲ್ಲ. ಅವನು ಕಾಗದ ಬರೆದು ಇನ್ನೆಲ್ಲಿ ಮರೆತಿಟ್ಟನೋ ಏನೋ, ಅಂತೂ ಈ ಕಾಗದದಿಂದ ರುಕ್ಮಿಣಿಗೆ ಒಂದು ಕಾಗದ ಬರೆದಿಟ್ಟಿದ್ದನೆಂದು ಸ್ಪಷ್ಟವಾಗುತ್ತೆ. ಇದನ್ನಂತೂ ಅವಳಿಗೇ ಬರೆದು ಬಿಟ್ಟಿದಾನೆ. ರುಕ್ಮಿಣಿಯ ನಡತೆಯ ಬಗ್ಗೆ ನನಗೆ ಎಳ್ಳಷ್ಟು ಸಂಶಯವಿಲ್ಲದಿದ್ದರೂ ಅವನ ಮನಸ್ಸು ಇಷ್ಟು ಕೀಳುತನಕ್ಕೆ ಇಳಿಯಿತಲ್ಲಾ ಎಂದು ವ್ಯಸನ ಅಷ್ಟೆ."

"ಭಾವಯ್ಯ, ನನಗೆ ಇಷ್ಟು ತೊರುತ್ತೆ. ಈ ವಿಚಾರದಲ್ಲಿ ಮುಚ್ಚು ಮರೆಯಿಂದ ಪ್ರಯೋಜನವಿಲ್ಲ. ಕೃಷ್ಣಸ್ವಾಮಿಯ ಮನಸ್ಸು ಎಂಥಾದ್ದು ಎಂದು ರುಕ್ಮಿಣಿಗೂ ತಿಳಿದಿದ್ದರೆ ಒಳ್ಳೆಯದು. ಮುಂದೆ ಅವನೊಡನೆ ನಡೆದುಕೊಳ್ಳುವ ಸಂದರ್ಭದಲ್ಲಿ ಎಚ್ಚರಿಕೆಯಿಂದ ಇರಲು ಅನುಕೂಲವಾಗುತ್ತೆ. ಈ ಕಾಗದದ ವಿಚಾರವನ್ನು ರುಕ್ಮಿಣಿಗೆ ತಿಳಿಸುವುದು ಮೇಲೆಂದು ನನಗೆ ತೋರುತ್ತೆ" ಎಂದು ಶಾಮಣ್ಣ ಸಲಹೆಮಾಡಿದನು.

ರಾತ್ರಿ ಊಟವಾದಮೇಲೆ ಮೂವರು ಸರಸವಾಗಿ ಮಾತುಕತೆಯಾಡುತ್ತ ಕುಳಿತಿದ್ದಾಗ, ಚಂದ್ರಶೇಖರಯ್ಯ ತಟ್ಟನೆ ಎದ್ದುಹೋಗಿ ಅಂಗಿಯ ಜೋಬಿನಿಂದ ಆ ಕಾಗದವನ್ನು ತಂದು ರುಕ್ಮಿಣಿಯ ಮುಂದೆ ಎಸೆದು, "ನಿನಗೆ ಬಂದ ಕಾಗದ. ಬಂದು ತುಂಬಾ ದಿನವಾಯಿತು. ನಾನೇ ಇಟ್ಟು ಕೊಂಡು ಬಿಟ್ಟಿದ್ದೆ. ಓದಿ ನೋಡಿಕೋ" ಎಂದ.

ಚಂದ್ರಶೇಖರಯ್ಯ ನಿಂತೇ ಇದ್ದ. ಶಾಮಣ್ಣ ಗಂಭೀರವಾಗಿ ಮೌನವಾಗಿದ್ದ. ರುಕ್ಮಿಣಿ ಕಾಗದವನ್ನು ತೆಗೆದು ಓದಿಕೊಂಡಳು ಅವಳ ಮನಸ್ಸು ಕ್ಷಣದಲ್ಲಿ ಕೋಪ, ಭಯ, ದುಃಖ, ಜುಗುಪ್ಸೆ ಈ ವಿವಿಧ ಭಾವಗಳ ರಣರಂಗವಾಯಿತು ಕೋಪ ತಿರಸ್ಕಾರಗಳಿಂದ,

"ಆ ಕಾಗದವನ್ನು ನಾನು ಸುಟ್ಟೆ. ಈ ಕಾಗದವನ್ನು ನೀವು ಸುಟ್ಟು ಬಿಡಿ. ಅಲ್ಲಿಗೆ ಮುಗಿಯಲಿ ಈ ಅನಿಷ್ಟ" ಎಂದು ಬಿರಸಾಗಿಯೇ ಹೇಳಿದಳು.

ಚಂದ್ರಶೇಖರಯ್ಯ ಮುಗುಳುನಗೆ ನಗುತ್ತ,

"ಯಾವ ಕಾಗದ ?" ಎಂದು ಕೇಳಿದ.

ರುಕ್ಮಿಣಿ ಚಂದ್ರಶೇಖರಯ್ಯನ ಮುಖವನ್ನು ಕತ್ತೆತ್ತಿ ನೋಡದೆ, ನೆಲವನ್ನೆ ದಿಟ್ಟಿಸುತ್ತ ಕುಳಿತಿದ್ದಳು. ಗಂಡನ ಪ್ರಶ್ನೆ ಕೆಣಕುವ ಪ್ರಶ್ನೆ ಎಂದು ಭಾವಿಸಿದಳು; ಭಯಗೊಂಡಳು; ಬೆವತಳು; ಬಿಕ್ಕಿಬಿಕ್ಕಿ ಅಳತೊಡಗಿದಳು.

ಚಂದ್ರಶೇಖರಯ್ಯ ಶಾಮಣ್ಣ ಇಬ್ಬರೂ ಬಗೆಬಗೆಯಲ್ಲಿ ಬಹುಹೊತ್ತು ಸಮಾಧಾನಮಾಡಿ ಭರವಸೆಯ ವಚನಗಳನ್ನಾಡಿದ ಮೇಲೆ, ರುಕ್ಮಿಣಿ ಶಾಂತಳಾಗಿ, ಕೃಷ್ಣಸ್ವಾಮಿಯ ಆ ಕಾಗದ ತನಗೆ ಅಕಸ್ಮಾತ್ ದೊರೆತ ಪರಿಯನ್ನೂ ಅದನ್ನು ತಾನು ಸುಟ್ಟ ಸಂಗತಿಯನ್ನೂ ವಿವರಿಸಿದಳು.

ಆಗ ಶಾಮಣ್ಣನೆಂದ: "ನೀನು ಆ ಹೊತ್ತೇ ಚಂದ್ರಶೇಖರಯ್ಯನಿಗೆ ಆ ಕಾಗದ ತೋರಿಸಿಬಿಟ್ಟಿದ್ದರೆ ಈ ಕಾಗದದ ಈ ಹಗರಣ ಆಗುತ್ತಲೇ ಇರಲಿಲ್ಲವೋ ?"

"ಹೌದು. ಹಾಗೆ ಮಾಡದೆ ನಾನು ತಪ್ಪು ಮಾಡಿದ ಹಾಗಾಯಿತು" ಎಂದು ರುಕ್ಮಿಣಿ ಒಪ್ಪಿಕೊಂಡಳು.

"ಅಲ್ಲ, ಕೇವಲ ಅಲ್ಪ ಸಂಗತಿಯನ್ನು ಮರೆಮಾಚಿಯೇ ಅದರ ಪರಿಣಾಮ ಹೀಗಾಯಿತು. ಇನ್ನು ನಿಜವಾಗಿಯೂ ಮಾಡಿದ ನೀಚ ಕೃತ್ಯಗಳನ್ನ ಮರೆಮಾಚಿ ಅವು ಬಯಲಾದರೆ ಪರಿಣಾಮ ಏನಾಗಬಹುದು!" ಎಂದು ಗಟ್ಟಿಯಾಗಿಯೇ ತನಗೆ ತಾನು ಹೇಳಿಕೊಂಡು ಆಶ್ಚರ್ಯಪಟ್ಟನು.

ಆ ಕಾಗದಕ್ಕೆ ಯಾವ ಗತಿಯಾಯಿತೋ ಈ ಕಾಗದಕ್ಕೂ ಅದೇ ಗತಿಯಾಯಿತು.

ಶಾಮಣ್ಣ ತಾನು ತನ್ನ ಅಂಗಡಿಗಾಗಿ ಕೊಂಡ ಕೆಲವು ಸ್ವದೇಶಿ ವಸ್ತುಗಳಲ್ಲಿ ರುಕ್ಮಿಣಿಗೆ ಕೆಲವನ್ನು ಬಹುಮಾನವಾಗಿ ಕೊಟ್ಟನು. ಶಾಮಣ್ಣನ ಒತ್ತಾಯಕ್ಕೆ ಒಲವಿನ ಒಪ್ಪಿಗೆಯಿತ್ತು. ಚಂದ್ರಶೇಖರಯ್ಯ ಇನ್ನು ಮುಂದೆ ತಾನು ಖಾದಿ ಧರಿಸುವುದಾಗಿಯೂ ಸಾಧ್ಯವಾದರೆ ರುಕ್ಮಿಣಿಗೂ ಖಾದಿ ಸೀರೆ ತೆಗೆದುಕೊಡುವುದಾಗಿಯೂ ಭರವಸೆ ಕೊಟ್ಟನು. ಇದರಿಂದ ಶಾಮಣ್ಣನಿಗೆ ಸಂತೋಷವಾಯಿತು. ಶಾಮಣ್ಣ ಕೃಷ್ಣಸ್ವಾಮಿಯ ಸಾಮಾನುಗಳನ್ನೆಲ್ಲವನ್ನೂ ನಾರಾಯಣಮೂರ್ತಿಗಳ ಮನೆಗೆ ಸುರಕ್ಷಿತವಾಗಿ ಸಾಗಿಸಿದನು.

## ೧೩
## ಒಂದು ವಿವರಣೆ

ಇಲ್ಲಿ ಓದುಗರಿಗೆ ಒಂದು ವಿವರಣೆ ಕೊಡುವ ಸಲುವಾಗಿ ಕಥೆಗೆ ಸ್ವಲ್ಪ ವಿಶ್ರಾಂತಿ ಕೊಡಬೇಕಾಗಿದೆ. ಇದಕ್ಕಾಗಿ ಅವರು ನನ್ನನ್ನು ದಯವಿಟ್ಟು ಕ್ಷಮಿಸಬೇಕು.

ಭಾಗ್ಯಲಕ್ಷ್ಮಿಯ ಮದುವೆಗೆ ನಾನು ಗಂಡಿನ ಕಡೆಯವನಾಗಿ ಹೋಗಿ ಹೆಣ್ಣಿನವರ ಮನೆಯಲ್ಲಿ ಓಡಾಡಿದ್ದದೆಂದು 'ಭಾಗ್ಯಲಕ್ಷ್ಮಿ' ಕಥೆಯಲ್ಲಿ ಹೇಳಿದ್ದೇನೆ. ಶಾಮಣ್ಣನ ತಂದೆ ಲಿಂಗಣಯ್ಯನವರೂ ನನ್ನ ತಂದೆಯೂ ಸಂಬಂಧಿಗಳಾದ್ದರಿಂದ ಅವರ ಮನೆಯವರೆಲ್ಲರೂ ನನಗೆ ತುಂಬ ಬೇಕಾದವರು; ಅಥವಾ ಅವರೆಲ್ಲರಿಗೆ ನಾನು ಬೇಕಾದವನು ಎಂದು ಬೇಕಾದರೂ ಇಟ್ಟುಕೊಳ್ಳಿ. ಶಾಮಣ್ಣನೂ ಕೃಷ್ಣಸ್ವಾಮಿಯೂ ಕಾಲೇಜಿಗೆ ಸೇರುವ ವೇಳೆಗೆ ನನ್ನ ಕಾಲೇಜಿನ ವಿದ್ಯಾಭ್ಯಾಸ ಮುಗಿದು ಬೆಂಗಳೂರಿನಲ್ಲಿ ಉದ್ಯೋಗದಲ್ಲಿದ್ದೆ. ನನ್ನ ತಂದೆಗೂ ನಾರಾಯಣಮೂರ್ತಿಗಳಿಗೂ ಪರಿಚಯವಾಗಿ, ನನ್ನ ತಂದೆ ನಾರಾಯಣಮೂರ್ತಿಗಳಿಂದ ಹಲವು ವಿಧಗಳಲ್ಲಿ ಸಹಾಯ ಪಡೆಯುತ್ತಿದ್ದರು. ನನ್ನ ತಂಗಿಯ ಮದುವೆಯಲ್ಲಿ ನನ್ನ ತಂದೆಗೆ ಸಾವಿರಾರು ರೂಪಾಯಿಗಳನ್ನು ನಾರಾಯಣಮೂರ್ತಿಗಳು ಕಾಗದ ಪತ್ರವಿಲ್ಲದೆ, ಬಡ್ಡಿಯಿಲ್ಲದೆ, ಸಾಲವಾಗಿ ಕೊಟ್ಟಿದ್ದರು. ನನ್ನ ವಿದ್ಯಾಭ್ಯಾಸವನ್ನು

ಮುಂದುವರಿಸುವುದಕ್ಕೂ ಅವರಿಂದ ಎಷ್ಟೋ ಸಹಾಯವಾಗಿತ್ತು. ನನ್ನ ತಂದೆ ತೀರಿಕೊಂಡ ಮೇಲೆ ಋಣಶೇಷವನ್ನು ಹರಿಸಲು ಸಾಧ್ಯವಾಗದೆ, ನಾರಾಯಣಮೂರ್ತಿಗಳನ್ನು ಕಂಡು—"ನಿಮಗೆ ಇನ್ನೂ ಮುನ್ನೂರೈವತ್ತು ರೂಪಾಯಿ ಕೊಡಬೇಕು ಎಂದು ನಮ್ಮ ತಂದೆ ಹೇಳುತ್ತಿದ್ದರು ಇನ್ನೂ ಇದೇ ತಾನೆ ಕೆಲಸಕ್ಕೆ ಸೇರಿದ್ದೇನೆ. ಕಾಲ ಕ್ರಮದಲ್ಲಿ ತೀರಿಸುತ್ತೇನೆ. ಸ್ವಲ್ಪ ಕಾಲಾವಕಾಶ ಕೊಡಬೇಕು" ಎಂದು ದೀನನಾಗಿ ಬೇಡಿಕೊಂಡೆ. ಆಗ ನಾರಾಯಣಮೂರ್ತಿಗಳ ಮುಖ ಕೋಪದಿಂದ ಬಿಗಿತುಕೊಂಡಿತು. "ಕಾಲಾವಕಾಶ ಕೊಡಲು ಸಾಧ್ಯವಿಲ್ಲ" ಎಂದು ಹೇಳುತ್ತಾರೆಂದು ನಿರೀಕ್ಷಿಸಿದ್ದ ನನಗೆ, "ಏನು ನೀನು ಹೇಳುವ ಮಾತು? ನಿನಗೆ ಬುದ್ಧಿಗಿದ್ಧಿ ಇದೆಯೋ ಇಲ್ಲವೋ? ಅವರು ತೀರಿದಾಗ ಸಾಲವೂ ತೀರಿತು. ಕನ್ಯಾದಾನಕ್ಕೆ ಕೊಟ್ಟ ಹಣವನ್ನು ನಿನ್ನ ಹೊಟ್ಟೆಗೆ ಮಣ್ಣುಹಾಕಿ ಕಿತ್ತುಕೊಳ್ಳಲೆ?" ಎಂದ ಅವರ ಸಾತ್ತ್ವಿಕ ಕೋಪದ ನುಡಿಗಳನ್ನು ಕೇಳಿ, ಆಶ್ಚರ್ಯವೂ ಸಂತೋಷವೂ ಕೃತಜ್ಞತೆಯೂ ಗೌರವವೂ ಏಕಕಾಲದಲ್ಲಿ ಉಂಟಾದುವು. ಅವರ ಸೌಜನ್ಯವನ್ನು ದುರಪಯೋಗಪಡಿಸಿಕೊಳ್ಳಬಾರದೆಂಬ ಭಾವನೆಯಿಂದ ನಾನು ಹೇಗಾದರೂ ಮಾಡಿ ಪಿತೃಋಣವನ್ನು ತೀರಿಸಿ ಶ್ರೇಯಸ್ಸನ್ನು ಪಡೆಯುವ ಅವಕಾಶ ಕೊಡಬೇಕೆಂದು ಒತ್ತಾಯಮಾಡಲು—"ಹಾಗಾದರೆ ಒಂದು ಉಪಕಾರ ಮಾಡು. ಹಣವನ್ನು ನಾನು ಮುಟ್ಟುವುದಿಲ್ಲ. ಅದು ಕನ್ಯಾದಾನಕ್ಕಾಗಿ ಕೊಟ್ಟ ಹಣ. ನೀನೂ ಕನ್ಯಾದಾನಕ್ಕೆ ಸಹಾಯ ಮಾಡು" ಎಂದರು. "ಕಳ್ಳತನವನ್ನಾದರೂ ಮಾಡಿ ಈ ಕೂಡಲೆ ಬೇಕಾದರೂ ಹಣ ತಂದುಕೊಟ್ಟೇನು. ವರನನ್ನು ಎಲ್ಲಿ ಹುಡುಕಲಿ?" ಎಂದು ನಕ್ಕೆನು. "ಅದಕ್ಕೇ ನಾನು ಹೇಳಿದ್ದು. ನಮ್ಮ ಭಾಗ್ಯಲಕ್ಷ್ಮಿಗೆ ವರನನ್ನು ಗೊತ್ತು ಮಾಡಿಕೊಟ್ಟರೆ ನಿಮ್ಮ ತಂದೆ ಕೊಡಬೇಕಾದ ಹಣಕ್ಕೆ ನೂರರಷ್ಟನ್ನು ಹಿಂದಿರುಗಿಸಿ ಕೊಟ್ಟಹಾಗೆ" ಎಂದು ಅವರೂ ನಕ್ಕು ನಡಿದರು. ಇನ್ನೂ ಆಗತಾನೆ ತಾರುಣ್ಯದ ಹೊಸಿಲನ್ನು ದಾಟ್ಟಿದ್ದ ನನಗೆ ವರನನ್ನು ಗೊತ್ತು ಮಾಡಿಕೊಡುವಷ್ಟು ವ್ಯಕ್ತಿಪ್ರಭಾವವಿರಲಿಲ್ಲ. ಏನು ಮಾಡುವುದೆಂದು ಯೋಚನೆಯಲ್ಲೇ ಕೆಲವು ಕಾಲ ಕಳೆಯಿತು. ಒಂದು ದಿನ ತಟ್ಟನೆ ಕೃಷ್ಣಸ್ವಾಮಿಯ ನೆನಪಾಗಿ, ಕೂಡಲೆ ಮೈಸೂರಿಗೆ ಹೋಗಿ, ಅವನನ್ನು

ಕರೆದುಕೊಂಡು ನಾರಾಯಣಮೂರ್ತಿಗಳ ಮನೆಗೆ ಹೋದೆ. ಕೃಷ್ಣಸ್ವಾಮಿ ಮದುವೆಗೆ ಒಪ್ಪಿಕೊಂಡ ನನಗೆ ತುಂಬ ಸಂತೋಷವಾಯಿತು. ಆ ಸಂದರ್ಭದಲ್ಲಿಯೇ ನಾರಾಯಣಮೂರ್ತಿಗಳು ತಮ್ಮ ಮದುವೆಯ ಪ್ರಸಂಗ, ತಮ್ಮ ಬಾಳಿನಲ್ಲಿ ಅದರಿಂದ ಆದ ಪರಿಣಾಮ ಪ್ರಭಾವಗಳನ್ನು ನನಗೆ ತಿಳಿಯ ಹೇಳಿದ್ದು. ಆ ಸಂಗತಿಯ ಆಧಾರದ ಮೇಲೆಯೇ ನಾನು 'ಭಾಗ್ಯಲಕ್ಷ್ಮಿ' ಕಥೆಯನ್ನು ಕಟ್ಟಿರುವುದು.

ಈ ಕಥೆಯಲ್ಲಿ ಇದುವರೆಗೆ ಹೇಳಿರುವ ಸಂಗತಿಗಳೆಲ್ಲ ಶಾಮಣ್ಣನಿಂದ ಸ್ವಲ್ಪ, ರುಕ್ಮಿಣಿಯಿಂದ ಕೊಂಚ, ನಾರಾಯಣಮೂರ್ತಿಗಳಿಂದ ಇನ್ನಷ್ಟು ಕೇವಲ ಪ್ರಾಸ್ತಾವಿಕವಾಗಿ ತಿಳಿಯಬಂದಿತು. ಕೃಷ್ಣಸ್ವಾಮಿಯಿಂದ ನನಗೆ ಈ ಸಂಬಂಧವಾಗಿ ಏನೂ ನೇರವಾಗಿ ತಿಳಿದು ಬರಲಿಲ್ಲ. ಏಕೆಂದರೆ, ಕೃಷ್ಣಸ್ವಾಮಿ ಬೆಂಗಳೂರಿನಲ್ಲಿ ಸಂಸಾರ ಹೂಡಿದ ಮೇಲೆ ಅವನಿದ್ದ ಅಲ್ಪ ಕಾಲಾವಕಾಶದಲ್ಲಿ, ನಾವಿಬ್ಬರೂ ಬೆಂಗಳೂರಿನಲ್ಲಿಯೇ ಇದ್ದರೂ ಒಬ್ಬರನ್ನೊಬ್ಬರು ನೋಡುತ್ತಿದ್ದದ್ದು ವಿರಳ. "ಭಾಗ್ಯಲಕ್ಷ್ಮಿಯನ್ನೂ ಕರೆದುಕೊಂಡು ಒಂದು ಸಲ ಮನೆಯ ಕಡೆ ಬಾ ಕಿಟ್ಟು" ಎಂದು ಎಷ್ಟೋ ಸಲ ಅವನನ್ನು ಬೇಡಿಕೊಂಡೆ. ಅವನು ಕಿವಿಗೊಡಲಿಲ್ಲ. ನಾನೇ ನನ್ನವಳನ್ನೂ ಕರೆದುಕೊಂಡು ಅವನ ಮನೆಗೆ ಒಂದು ಸಲ ದಾಳಿಯಿಟ್ಟೆ. "ಉಭಯ ಕುಶಲೋಪರಿ" ನಡೆಯಿತೇ ಹೊರತು ತನ್ನ ಮನಸ್ಸಿನಲ್ಲಿದ್ದುದೇನನ್ನೂ ಅವನು ನನ್ನ ಮುಂದೆ ಬಿಚ್ಚಿಡಲಿಲ್ಲ. ತನ್ನ ಹೆಂಡತಿಗೇ ಹೇಳದಿದ್ದವನು ನನಗೆ ಹೇಳುತ್ತಾನೆಯೇ? ಅವನ ಸ್ವಭಾವವೇ ಹೀಗೆ, ಮೌನಗಂಭೀರ ಎಂದು ಆಮೇಲೆ ನನಗೆ ವ್ಯಕ್ತಪಟ್ಟಿತು. ಅವನು ತನ್ನ ಕೆಲಸಕ್ಕೆ ರಾಜಿನಾಮೆ ಕೊಟ್ಟು ಮದರಾಸಿಗೆ ಹೋದದ್ದು ಅವನು ಅಲ್ಲಿಗೆ ಹೋದ ಮೇಲೆಯೇ ನನಗೆ ಚಂದ್ರಶೇಖರಯ್ಯನಿಂದ ತಿಳಿದದ್ದು. ಆಗ ನಿಜವಾಗಿ ನನಗೆ ಕೃಷ್ಣಸ್ವಾಮಿಯ ಮೇಲೆ ಕೋಪ ಬಂದಿತು. ಪ್ರತ್ಯಕ್ಷವಾಗಿಯಲ್ಲದಿದ್ದರೂ ಪರೋಕ್ಷವಾಗಿ ಅವನ ಮದುವೆ, ಆ ವರೆಗಣ ಪುರೋಭಿವೃದ್ಧಿ ಇವಕ್ಕೆ ಕಿಂಚಿನ್ಮಾತ್ರವಾದರೂ ಕಾರಣಭೂತನಾದ ನನ್ನ ಮೇಲೆ ಅವನಿಗೆ ಅಷ್ಟು ತಿರಸ್ಕೃತಿಯೇ ಎಂದು ನೆನೆದಾಗಲಂತೂ ನನ್ನ ಕೋಪ ಇಮ್ಮಡಿಸಿತು. ಆದರೆ, ಅವನ ಹಿತಚಿಂತಕನಾದ ನಾನು ನನ್ನ ಕೋಪವನ್ನು ನುಂಗಿಕೊಂಡು,

" ಅವನು ಪರೀಕ್ಷೆ ಮಾಡಿ ಮದರಾಸಿನಿಂದ ಸುಖವಾಗಿ ಹಿಂತಿರುಗಿ ಬರಲಿ" ಎಂದು ಎಲ್ಲರಂತೆ ನಾನು ಮನಸ್ಸಿನಲ್ಲಿ ಶುಭವನ್ನೇ ಕೋರಿದೆ.

ಆದರೆ, ಬಡಪಾಯಿಗಳಾದ ನಮ್ಮ ಕೋರಿಕೆ ಯಾವ ದೈವದ ಕಿವಿ ಮುಟ್ಟಬಲ್ಲದು? ನಾನೇಕೆ? ಹೆತ್ತ ಹೆಣ್ಣನ್ನು ಕೈಯಲ್ಲಿಟ್ಟ ನಾರಾಯಣ ಮೂರ್ತಿಗಳು ಅವನಿಗೋಸ್ಕರ ಬೇಕಾದಷ್ಟು ಹಣವನ್ನೂ ತೆತ್ತು (ಇದು ನಾನು ಉಪಯೋಗಿಸಿರುವ ಮಾತು; ಅವರ ಬಾಯಿಂದ ಎಂದೂ ಈ 'ನಿಜದ' ನುಡಿ ಬಂದುದಿಲ್ಲ ನಾನು ಬಲ್ಲಮಟ್ಟಿಗೆ) ಅವನ ಶುಭವನ್ನು ಸರ್ವದಾ ಕೋರುತ್ತಿದ್ದರು. ಅಂಥ ಸತ್ಪುರುಷರ ಶುಭಾಕಾಂಕ್ಷೆಗೂ ಕೃಷ್ಣಸ್ವಾಮಿ ಹಿಡಿದ ವಕ್ರಗತಿಯನ್ನು ತಿರುಗಿಸುವ ಶಕ್ತಿಯಿರಲಿಲ್ಲ.

ಕೃಷ್ಣಸ್ವಾಮಿ ವಕ್ರಗತಿ ಹಿಡಿದನೆಂದು ಹೇಳಿದೆನಲ್ಲವೆ? ಹೌದು; ಅವನು ಅಡ್ಡದಾರಿ ಹಿಡಿದ. ಅದು ಏನೆಂಬುದನ್ನು ಮುಂದೆ ಸೂಚಿಸುವವನಾಗಿದ್ದೇನೆ; ಅದರ ವಿವರಗಳು ನನಗೆ ಹೆಚ್ಚಾಗಿ ತಿಳಿದು ಬರಲಿಲ್ಲ. ತಿಳಿದು ಬಂದ ಹಲ ಕೆಲವು ಸಂಗತಿಗಳಾದರೂ ಮುಖ್ಯವಾಗಿ ಈ ಮೊದಲೆ ನನ್ನ ಕಥೆಯಲ್ಲಿ ಬಂದಿರುವ ಅವನ ಹತ್ತಿರದ ಬಂಧುಗಳಿಂದ ತಿಳಿದು ಬಂದವು. ಎರಡು ಮೂರು ಸಂದರ್ಭಗಳನ್ನು ಮಾತ್ರ ಅವರು ಪ್ರತ್ಯಕ್ಷವಾಗಿ ಕಂಡು ಬಲ್ಲರೇ ಹೊರತು, ಉಳಿದ ಹಲವು ಅವರ ಪ್ರತ್ಯಕ್ಷಾನುಭವಕ್ಕೂ ಬಂದವಲ್ಲ; ಹಾಗೆ ಹೀಗೆ ಅವರಿಂದ ಇವರಿಂದ ಕೇಳಿ ತಿಳಿದವು. ಕೆಲವನ್ನಂತೂ ಅವರುಗಳು ಹೀಗೆಯೇ ಇರಬೇಕೆಂದು ಕಥೆಗಾರನಂತೆ ಕಲ್ಪಿಸಿಕೊಂಡವು. ವಿಷಯ ಸಂಗ್ರಹಣ ಹೇಗೇ ನಡೆದರೂ, ಅದರ ವಿವರಣೆಯಲ್ಲಿ ಎಷ್ಟೇ ಉತ್ಪ್ರೇಕ್ಷೆ ಅತಿಶಯೋಕ್ತಿ ಕಲ್ಪನೆಗಳಿದ್ದರೂ, ತಿರುಳಾದ ಸತ್ಯಾಂಶಕ್ಕೆ ಭಂಗಬಾರದು. 'ಒಬ್ಬನು ಹಣ್ಣು ಕೊಯ್ಯಲು ಹೋಗಿ ಮರದಿಂದ ಬಿದ್ದು ಸತ್ತ' ಎಂಬ ಸುದ್ದಿಯನ್ನು ಕೇಳಿದ ಕೂಡಲೆ ಅವನು ಬಿದ್ದ ಸನ್ನಿವೇಶದ ಚಿತ್ರ ಅವರವರ ಅನುಭವ ಸಂಸ್ಕಾರಕ್ಕೆ ಅನುಗುಣವಾಗಿ ಕೇಳುವವರ ಮನಸ್ಸಿನಲ್ಲಿ ಅಪ್ರಯತ್ನವಾಗಿಯೆ ಮೂಡಿ ನಿಲ್ಲುತ್ತದೆ; ಹೇಳುವವರಾದರೂ ಹೇಳುವ ಸುದ್ದಿಗೆ ಬಣ್ಣ ಕಟ್ಟಿ ಕೇಳುವವರ 'ಮನಂಬುಗು'ವಂತೆ ವಿವರಪೂರ್ಣವಾಗಿ ತಿಳಿಸುತ್ತಾರೆ. ಹಾಗೆ ತಿಳಿಸುವಾಗ, ಹೇಳುವವನು ಒಂದು ಟೀಕೆ ಮಾಡಿ, ಕೇಳುವವನು ತನ್ನ ಒಂದು ಟೀಕೆಯನ್ನು

ಸೇರಿಸಬಹುದು. 'ಅವನಿಗೆ ತಕ್ಕ ಶಿಕ್ಷೆಯಾಯಿತು' ಎಂದು ಅವನ ಟೀಕೆ; 'ಅವನು ಹಣ್ಣು ಕದಿಯಲು ಹೋಗಿ ಮರ ಹತ್ತಿರಬಹುದು. ಆದರೆ ಈ ಶಿಕ್ಷೆಯೇ? ಅಯ್ಯೋ ಪಾಪ' ಎಂದು ಇವನ ಟೀಕೆ. ಕಥೆಗಾರನ ಕೈಯಲ್ಲಿ ಕಥೆ ಬೆಳೆಯುವುದೂ ಹೀಗೆಯೇ. ನಾನು ಈ ಕಥೆಯಲ್ಲಿ ಈ ಹಿಂದೆ ಚಿತ್ರಿಸಿರುವ ಮಾತುಕಥೆ, ಸನ್ನಿವೇಶ, ಸಣ್ಣಪುಟ್ಟ ಘಟನೆಗಳು—ಎಲ್ಲವೂ ತದ್ವತ್ ಹಾಗೆಯೇ ನಡೆದುವು ಎಂದು ಯಾರೂ ಭಾವಿಸಬೇಕಾಗಿಲ್ಲ; ಅವೆಲ್ಲಾ ಕಲ್ಪಿತವೇ ಆದರೂ ಅದಕ್ಕೆ ಸತ್ಯಾಂಶದ ಆಧಾರವುಂಟು ಎಂದು ಮಾತ್ರ ಸೂಚಿಸಬಲ್ಲೆ. ಒಂದು ಉದಾಹರಣೆ ಕೊಡಬಯಸುತ್ತೇನೆ: ಕೃಷ್ಣಸ್ವಾಮಿ ರುಕ್ಮಿಣಿಗೆ ಬರೆದ ಕಾಗದಗಳ ಸಂಗತಿ ನನಗೆ ಬಹುಕಾಲದ ಮೇಲೆ ಯಾವುದೋ ಸಂದರ್ಭದಲ್ಲಿ ತಿಳಿಯಿತು; ಆದರೆ, ಕಥೆಯ ಕಾಲ ಕ್ರಮಣಕ್ಕೆ ಅದನ್ನು ಅಳವಡಿಸುವುದು ಆವಶ್ಯಕವೆನಿಸಿತು. ಅಲ್ಲದೆ, ಆ ಕಾಗದಗಳನ್ನು ನಾನು ಕಣ್ಣಿಂದ ಕಂಡವನಲ್ಲ—ಸುಟ್ಟ ಕಾಗದಗಳನ್ನು ಕಾಣುವುದಾದರೂ ಹೇಗೆ? ಕಾಗದದ ಸಂಗತಿ ಹೇಳಿದವರು ಅದರ ಒಕ್ಕಣೆಯನ್ನು ನನಗೆ ವಿವರಿಸಿರಲಿಲ್ಲ. ಆದರೆ, ಇಂಥ ಸನ್ನಿವೇಶದಲ್ಲಿ ಹೀಗೆಯೇ ಕಾಗದ ಬರೆದಿರಬೇಕು ಎಂದು ಊಹಿಸುವುದು ಕಷ್ಟವೇನಲ್ಲ. ಒಟ್ಟಿನಲ್ಲಿ, ಇಷ್ಟು ಹೇಳಿ ಮತ್ತೆ ಕಥೆಯನ್ನು ಮುಂದುವರಿಸುತ್ತೇನೆ: 'ಜೀರಗೆ ಪೆಪ್ಪರಮೆಂಟು' ಎಂದು ಒಂದು ಬಗೆಯ ಪೆಪ್ಪರಮೆಂಟು ಉಂಟು. ಸಕ್ಕರೆಯನ್ನೆಲ್ಲ ಚಪ್ಪರಿಸಿ ಸವಿದ ಮೇಲೆ ಅದರೊಳಗಿನ ಜೀರಗೆ ನಾಲಗೆಯ ಮೇಲೆ ನಿಲ್ಲುತ್ತದೆ. ಅದನ್ನು ಅಗಿದು ನುಂಗಬಹುದು, ಇಲ್ಲವೆ ಉಗಿದು ಬಿಡಬಹುದು. ಈ ಕಥೆಯಲ್ಲಿನ ಸತ್ಯಸಂಗತಿ ಪ್ರಮಾಣ ದೃಷ್ಟಿಯಿಂದ ಪೆಪ್ಪರಮೆಂಟಿನೊಳಗಿನ ಜೀರಗೆಕಾಳು. ಬರಿಯ ಜೀರಗೆಕಾಳು ಕೊಟ್ಟರೆ ಯಾರು ತಾನೆ ತಿನ್ನಬಹುದು?

ಈ ಕಥೆಯಲ್ಲಿ ಇದುವರೆಗೆ ನಾನು ಮುಖ ತೋರಿಸಿರಲಿಲ್ಲ. ಮುಂದೆ ಆಗೊಮ್ಮೆ ಈಗೊಮ್ಮೆ ನಾನೂ ಸುಳಿದು ಹೋಗುತ್ತೇನೆ. "ಇದೇನು, ಕಥೆಯಲ್ಲಿ 'ನಾನು' ಎಂದು ಇವನೊಬ್ಬ ಬಂದ!" ಎಂದು ನೀವು—ಓದುಗರು—ಅಚ್ಚರಿಪಡದಿರಲಿ ಎಂಬ ಕಾರಣದಿಂದಲೂ ಈ 'ವಿಷ್ಕಂಭಕ'ವನ್ನು ನಡುವೆ ನುಸುಳಿಸಬೇಕಾಯಿತು. ಆ 'ನಾನು' ನಾನೇ!

## ೧೪
## ಅಳಿಯನ ಕೋರಿಕೆಗೆ ಮನ್ನಣೆ

ಕೃಷ್ಣಸ್ವಾಮಿ ಮದರಾಸಿಗೆ ಹೋದಕೂಡಲೆ ಒಂದು ಹೋಟಲಿನಲ್ಲಿ ಬಿಡಾರ ಮಾಡಿದ. ಕಾಲೇಜಿಗೂ ಸೇರಿಕೊಂಡ. ಅಲ್ಲಿ ಸಾಯಂಕಾಲದ ವೇಳೆಯಲ್ಲಿ ಮಾತ್ರ ತರಗತಿಗಳು ನಡೆಯುತ್ತಿದ್ದುದರಿಂದ, ಹಗಲ ಹೊತ್ತೆಲ್ಲ ಬಿಡುವೆ. ಆ ಹೊತ್ತನ್ನೆಲ್ಲ ಅವನು ಕ್ರಮವರಿತು ಓದಿನಲ್ಲಿಯೂ ಸತ್ಸಂಗ ದಲ್ಲಿಯೂ ಸರ್ವಸಾಮಾನ್ಯವಾದ ವಿಹಾರಗಳಲ್ಲಿಯೂ ಕಳೆಯುತ್ತಿದ್ದಿದ್ದರೆ ಎಷ್ಟೋ ಮೇಲಾಗುತ್ತಿತ್ತು. ಆದರೆ ಹಾಗೆ ಮಾಡಲಿಲ್ಲ.

ನಾರಾಯಣಮೂರ್ತಿಗಳು ತಾವು ಮಾತುಕೊಟ್ಟಿದ್ದ ಪ್ರಕಾರ ತಪ್ಪದೆ ಪ್ರತಿ ತಿಂಗಳೂ ಹಣ ಕಳಿಸಿಕೊಡುತ್ತಿದ್ದರು. ಹಿಂದೆಯೇ ತಿಳಿಸಿದಂತೆ, ಅವನು ನಾರಾಯಣಮೂರ್ತಿಗಳಿಗೆ ಬರೆದದ್ದು ಒಂದೇ ಕಾಗದ; ಆಮೇಲೆ ಅವನು ಬೇಸಗೆಯ ರಜಕ್ಕೆ ಮೈಸೂರಿಗೆ ಬರುವರೆಗೂ ಒಂದಾದರೂ ಕಾಗದ ಬರೆದಿರ ಲಿಲ್ಲ. ಅವನು ಮದರಾಸಿನಲ್ಲಿಯೇ ಉಳಿದುಕೊಂಡು, ವ್ಯಾಸಂಗ ನಿರತನಾಗಿ ಆರೋಗ್ಯವಾಗಿದ್ದನೆಂಬುದಕ್ಕೆ ಅವನಿಂದ ತಪ್ಪದೆ ಬರುತ್ತಿದ್ದ ಮನಿಯಾರ್ಡ ರಿನ ರಸೀತಿಗಳಷ್ಟೆ ಸಾಕ್ಷಿಗಳು. ಇದರಿಂದ ನಾರಾಯಣಮೂರ್ತಿಗಳಿಗೆ ಅಸಮಾಧಾನವೇನೂ ಆಗಲಿಲ್ಲ; ಆದರೆ, ಆತಂಕವಾಯಿತು. ನಾಲ್ಕೈದು ತಿಂಗಳಾದರೂ ಕಾಗದ ಬಾರದಿರಲು, ಅವರು ಉದ್ವೇಗಗೊಂಡು ಭಾಗ್ಯಲಕ್ಷ್ಮಿಗೆ ಹೇಳಿಅವಳಿಂದ ಒಂದು ಕಾಗದ ಬರಸಿದರು. ಅವಳಿಗೆ ಇನ್ನೂ ಒಲವಿನ ಓಲೆ ಬರೆಯಲು ಬಾರದು. ಅವಳು ಸಾಂಪ್ರದಾಯಿಕವಾಗಿ "ಪಾದಪದ್ಮಂಗಳಲ್ಲಿ ನಮಸ್ಕಾರ" ಎಂದು ಆರಂಭಮಾಡಿ, ತನ್ನ ಹೆಸರಿನೊಡನೆ ಮುಗಿಸಿ, ನಾಲ್ಕೈದು ಪಂಕ್ತಿಗಳ ಕ್ಷೇಮಸಮಾಚಾರದ ಕಾಗದ ಬರೆದಿದ್ದಳು. ಅದರಲ್ಲಿ ಕೂಡ "ನಿಮ್ಮ ಆರೋಗ್ಯದ ವಿಚಾರದಲ್ಲಿ ನನ್ನ ತಂದೆ ತಾಯಿ ಆತಂಕ ಪಡುತ್ತಿದ್ದಾರೆ" ಎಂದು ಬರೆದಿದ್ದಳಲ್ಲದೆ, ತನ್ನ ವಿಚಾರ ಏನೂ ಹೇಳಿ ಕೊಂಡಿರಲಿಲ್ಲ. ಇದಕ್ಕೆ ಕೃಷ್ಣಸ್ವಾಮಿ ಅಷ್ಟೇ ಸಂಗ್ರಹವಾದ ಪ್ರತ್ಯುತ್ತರ ಬರೆದಿದ್ದ. ಈ ಕಾಗದವನ್ನು ನಾರಾಯಣಮೂರ್ತಿಗಳು ನನಗೆ ತೋರಿದ ರಾದ್ದರಿಂದ ಅದರ ಒಕ್ಕಣೆ ನನಗೆ ನೆನಪಿರುವ ಮಟ್ಟಿಗೆ ಹೀಗಿತ್ತು:

"ಸೌಭಾಗ್ಯವತಿಗೆ ಆಶೀರ್ವಾದ. ನನ್ನ ಆರೋಗ್ಯದ ವಿಚಾರವಾಗಿ ನೀವು ಯಾರೂ ಕಳವಳಪಡಬೇಕಾಗಿಲ್ಲ. ನಾನು ಬೇಸಗೆ ರಜಕ್ಕೆ ಮೈಸೂರಿಗೆ ಬರಬೇಕೆಂದು ಮಾಡಿಕೊಂಡಿದ್ದೇನೆ. ನಿಮ್ಮ ತಂದೆ ಕಳಿಸಿ ಕೊಡುತ್ತಿರುವ ಹಣ ನನಗೆ ಏತೇತಕ್ಕೂ ಸಾಲದು. ಆದ್ದರಿಂದ ಇಲ್ಲಿ ಯಾವು ದಾದರೂ ಕೆಲಸಕ್ಕೆ ಸೇರಿಕೊಳ್ಳಬೇಕೆಂದು ಮಾಡಿಕೊಂಡಿದ್ದೇನೆ. ಬರಿಯ ಕ್ಷೇಮಸಮಾಚಾರಕ್ಕಾದರೆ ನಿಮ್ಮ ತಂದೆಯೇ ನನಗೆ ಬರೆಯಬಹುದು. ನೀನು ಬರೆಯದೆ ಇದ್ದರೆ ಮೇಲು"

ಮುಗ್ಧಮನದ ಭಾಗ್ಯಲಕ್ಷ್ಮಿ ಈ ಕಾಗದವನ್ನು ತನ್ನ ತಂದೆಗೆ ತೋರಿಸಿ ಬಿಟ್ಟಳು; ಅವರಿಂದ ಅದು ಅವಳ ತಾಯಿ ಮತ್ತು ಗೌರಮ್ಮನವರ ಗಮನಕ್ಕೂ ಬಂದಿತು. ಗೌರಮ್ಮನವರಿಗೆ ಸ್ವಲ್ಪ ಕೋಪವೇ ಆಯಿತು: "ಲೇ ಭಾಗ್ಯ, ಅವನು ಬೇಸಗೆ ರಜಕ್ಕೆ ಬಂದಾಗ 'ಕಾಗದ ಬರೆಯುವುದು ಹೇಗೆ? ಹೇಳಿ ಕೊಡಿ, ಅಂತ ಅವನನ್ನು ಕೇಳು" ಎಂದು ಭಾಗ್ಯಲಕ್ಷ್ಮಿಗೆ ಹೇಳಿ, "ಕೃಷ್ಣಸ್ವಾಮಿ ಅದೇನೋ ಒಂದು ತರಹವಾಗಿಬಿಟ್ಟಿದಾನೆ, ಅಲ್ಲವೆ?" ಎಂದು ತಮ್ಮ ನಾದಿನಿಯನ್ನು ಕೇಳಿದರು. ಜಯಲಕ್ಷಮ್ಮನವರು, "ಮೊದಮೊದಲು ನಿಮ್ಮ ತಮ್ಮಂದಿರೂ ಹೀಗೆಯೇ ಇರಲಿಲ್ಲವೆ? ಅಳಿಯ ತನ್ನ ಹೆಂಡತಿಯ ಮೇಲೆ ಮುನಿಸಿಕೊಳ್ಳದೆಹೋದರೆ ಅತ್ತೆಮಾವ ಅವನಿಗೆ ಹೆದರಿಕೊಳ್ಳುವುದೇ ಇಲ್ಲ. ಈ ಅಳಿಯತನವೆಲ್ಲ ಒಂದು ಮಗು ಆಗುವವರೆಗೆ. ಆಮೇಲೆ ಎಲ್ಲ ತಾನೇ ಸರಿಹೋಗುತ್ತೆ" ಎಂದು ಮುಗುಳುನಗೆ ನಗುತ್ತಲೇ ಹೇಳಿದರು. ನಾರಾಯಣಮೂರ್ತಿಗಳಿಗೆ ತಮ್ಮ ಹಿಂದಿನ ಚರಿತ್ರೆ ನೆನಪಾಗಿ, ಅವರಿಗೂ ತುಸ ನುಗು ಬಂದಿತು; "ಲೋಕ ಸ್ವಭಾವವೇ ಹೀಗೆ. ಅವನದ್ದೇನು ಹೆಚ್ಚಿನ ಅಪರಾಧ, ಪಾಪ!" ಎಂದು ಸಮಾಧಾನಗೊಂಡು, ಅಳಿಯನ ಕೋರಿಕೆಗೆ ಬೆಲೆಕೊಟ್ಟು, ತಿಂಗಳಿಗೆ ಇನ್ನು ಇಪ್ಪತ್ತೈದು ರೂಪಾಯಿಗಳನ್ನು ಕಳಿಸ ತೊಡಗಿ, ಅಳಿಯನನ್ನು ಗೌರವಿಸಿದರು.

## ೧೫
## ಮುರಳಿ ಮಾವನ ಮನೆಯಲ್ಲಿ

ಕೃಷ್ಣಸ್ವಾಮಿ ಬರೆದಿದ್ದ ಮೇರೆಗೆ ಬೇಸಗೆ ರಜದಲ್ಲಿ ನೇರವಾಗಿ ಮೈಸೂರಿಗೆ ಬಂದನು. ಅವನು ಆರೋಗ್ಯವಾಗಿರುವನೆಂದು ಪ್ರತ್ಯಕ್ಷವಾಗಿ ಕಂಡು ಎಲ್ಲರಿಗೂ ಹರ್ಷವಾಯಿತು ಎಂಟು ಹತ್ತು ತಿಂಗಳುಗಳ ಮದರಾಸು ವಾಸದಿಂದಲೇ ಅವನ ರೂಪಿನಲ್ಲಿಯೂ ಉಡುಪಿನಲ್ಲಿಯೂ ಬಹಳ ಮಾರ್ಪಾಟಾಗಿತ್ತು. ಅವನು ಈಗ ಜುಟ್ಟನ್ನು ತೆಗೆಯಿಸಿ, 'ಕ್ರಾಪು' ಮಾಡಿಸಿಕೊಂಡಿದ್ದನು. ಇದರಿಂದ ಮನೆಯ ಹಿರಿಯರಿಗೆ ತುಸ ಅಸಮಾಧಾನ ವೆನಿಸಿದ್ದರೂ, ಗಂಡ ಹೆಚ್ಚು ಗೆಲುವಾಗಿ ಕಾಣುತ್ತಾನೆಂದು ಬಗೆದಳು ಭಾಗ್ಯಲಕ್ಷ್ಮಿ. ಅವನ ಮೈಬಣ್ಣ ಕಂದು ತಿರುಗಿತ್ತು; ತೆಳುಮೈ ಕೊಂಚ ಸ್ಥೂಲವಾಗಿತ್ತು; ತುಟಿಗಳು ಭಾಗ್ಯಲಕ್ಷ್ಮಿಯ ತುಟಿಗಳಿಗಿಂತ ಕೆಂಪಾಗಿದ್ದವು: ಕಾರಣ, ದಿನವೆಲ್ಲ ತಾಂಬೂಲ ಮೆಲ್ಲುವುದನ್ನು ಅಭ್ಯಾಸ ಮಾಡಿದ್ದನು. ಉಡುಪಿನಲ್ಲಿ ಮದರಾಸಿನ ಶೈಲಿ ಸೊಬಗುಗಳು ಮೈದೋರಿದ್ದವು: ಉಡುವುದಕ್ಕೆ ಸರಿಗೆಯಂಚಿನ ಪಂಚೆ; ತೊಡಲು ರೇಷ್ಮೆಯ ಜುಬ್ಬ; ಹೆಗಲ ಮೇಲೆ ಮಡಿಕೆಯ ಸರಿಗೆಯ ಶಲ್ಯ. ಅಪ್ಪಟ ಮದರಾಸಿಯಾಗಿದ್ದ ನವನು. ಈ ಮಾರ್ಪಾಟನ್ನು ಕಂಡು ಗೌರಮ್ಮನವರು ಮೂಗಿನ ಮೇಲೆ ಬೆರಳಿಟ್ಟರು; "ಮೆರೆತಕ್ಕೆ ಹೊರಟರೆ ನಾಣು ಕಳಿಸುವ ದುಡ್ಡು ಹೇಗೆ ತಾನೇ ಸಾಕಾದೀತು? ಅದಕ್ಕೇ ಹಾಗೆ ಬರೆದಿದ್ದ!" ಎಂದುಕೊಂಡರು ತಮ್ಮ ಮನಸ್ಸಿನಲ್ಲಿ. ನಾರಾಯಣಮೂರ್ತಿಗಳು ಮತ್ತು ಜಯಲಕ್ಷಮ್ಮ ನವರು ಕೂಡ ಹಳೆಯ ಸಂಪ್ರದಾಯದವರೇ. ಅಳಿಯನ ಉಡುಪಿನಲ್ಲಾದ ಮಾರ್ಪಾಟು ಅವರಿಗೆ ಅಚ್ಚರಿಯನ್ನುಂಟುಮಾಡಲಿಲ್ಲ; ಆದರೆ ಅವನು ಜುಟ್ಟು ತೆಗೆಸಿದ್ದದ್ದು ಅವರ ಮನಸ್ಸಿಗೆ ಸ್ವಲ್ಪ ನೋವನ್ನುಂಟು ಮಾಡಿದ್ದುದಲ್ಲದೆ ಕೊಂಚ ಕಳವಳಕ್ಕೂ ಕಾರಣವಾಗಿತ್ತು. ಆಗ ತಾನೆ ಎಸ್. ಎಸ್. ಎಲ್. ಸಿ. ಪರೀಕ್ಷೆ ಮಾಡಿ ಜೂನಿಯರ್ ಇಂಟರ್‌ಮೀಡಿಯಟ್ ತರಗತಿಗೆ ಬಂದಿದ್ದ ರಾಮಮೂರ್ತಿ ಜುಟ್ಟು ತೆಗೆಸಿ ಕ್ರಾಪು ಬಿಡುವುದಕ್ಕೆ ಸನ್ನಾಹ ನಡಸುತ್ತಿದ್ದ. ಭಾವನ ಮೇಲುಪಂಕ್ತಿ ಅವನಿಗೆ ಎಲ್ಲಿ ಪ್ರೋತ್ಸಾಹ ಕೊಡುವುದೋ ಎಂದು ಅವರ ಕಳವಳ.

ಕೃಷ್ಣಸ್ವಾಮಿಯ ಉಡುಪಿನಲ್ಲಾದ ಮಾರ್ಪಾಟು ಅವನ ಅತ್ತೆ ಮಾವಂದಿರಿಗೆ ಅಚ್ಚರಿಯನ್ನುಂಟುಮಾಡಿದ್ದಂತೆಯೇ ಭಾಗ್ಯಲಕ್ಷ್ಮಿಯ ಉಡಿಗೆತೊಡಿಗೆಯಲ್ಲಾಗಿದ್ದ ಮಾರ್ಪಾಟು ಅವನಿಗೂ ಅಚ್ಚರಿಯನ್ನುಂಟು ಮಾಡಿತು. ಖಾದಿಯ ಬಿಳಿಯ ಸೀರೆಯುಟ್ಟು ಭಾಗ್ಯಲಕ್ಷ್ಮಿ ಹಿಂದೆ ಎಂದೂ ಇಲ್ಲದ ಅದೊಂದು ಬಗೆಯ ಸರಳ ಸೌಂದರ್ಯದಿಂದ ಒಪ್ಪುತ್ತಿದ್ದಳು. ಮೊದಲಿನಂತೆ ಹೆಚ್ಚಿನ ಒಡವೆಗಳನ್ನೂ ಧರಿಸುತ್ತಿರಲಿಲ್ಲ. ಅವಳ ತಮ್ಮಂದಿರೂ ಸಂಪೂರ್ಣವಾಗಿ ಖಾದಿ ಧರಿಸುತ್ತಿದ್ದುದು ಅವನ ಗಮನಕ್ಕೆ ಬಂದಿತು. ಹೆಂಡತಿಯ ಸರಳ ಸೌಂದರ್ಯ ಗಂಡನ ಕಣ್ಣಿನಲ್ಲಿ ಸಪ್ಪೆಯಾಗಿ ಕಂಡಿತು. ಪತ್ತು ಸಲ ಕಾಫಿ ಕುಡಿಯುವವನಿಗೆ ಹಸುವಿನ ಹಾಲು ರುಚಿಸುವುದೆ?

ರುಕ್ಮಿಣಿಯನ್ನು ಮರೆಯಬೇಕು; ತಕ್ಕಮಟ್ಟಿಗೆ ಚೆಲುವೆಯೇ ಆದ ಭಾಗ್ಯಲಕ್ಷ್ಮಿಯನ್ನೇ ತನ್ನ ಮೋಹದ ಮಡದಿಯನ್ನಾಗಿ ಮಾರ್ಪಡಿಸಿ ಕೊಳ್ಳಬೇಕು; ತಾನು ವಕೀಲನಾದಮೇಲೆ ವಕೀಲನಿಗೆ ತಕ್ಕ ವೈಯಾರದ ವಿಲಾಸವತಿಯಾಗುವಂತೆ ಅವಳನ್ನು ತಿದ್ದಿಕೊಳ್ಳಬೇಕು: ಅವಳಿಗೆ ವೀಣೆ ಹೇಳಿಸಬೇಕು, ಇಂಗ್ಲಿಷು ಕಲಿಸಬೇಕು-ಎಂದು ಮುಂತಾಗಿ ಕೃಷ್ಣಸ್ವಾಮಿ ಏನೇನೋ ಕನಸುಕಾಣುತ್ತಿದ್ದನು. ಅದಕ್ಕೆ ಪೀಠಿಕೆಯಾಗಿಯೊ ಎಂಬಂತೆ, ಮಾವನವರು ತನಗೆ ಕಳಿಸುತ್ತಿದ್ದ ಹಣದಲ್ಲಿ ಸ್ವಲ್ಪ ಉಳಿತಾಯ ಮಾಡಿ, ಅದರಲ್ಲಿ ತನಗೊಂದು ಕೈಗಡಿಯಾರ ತೆಗೆದುಕೊಂಡಿದ್ದನು; ಹೆಂಡತಿಗಾಗಿ ಒಂದು ಸೊಗಸಾದ ನಸುನೀಲಿಯ ರೇಷ್ಮೆ ಸೀರೆಯನ್ನೂ ಅದಕ್ಕೆ ಹೊಂದಿ ಕೊಳ್ಳುವಂತೆ ಕೇಸರಿಬಣ್ಣದ ಜಾಕೆಟ್‌ಬಟ್ಟೆಯನ್ನೂ ತಂದಿದ್ದನು.

ಮೈಸೂರಿಗೆ ಹಿಂತಿರುಗಿದ ಮೇಲೆ ಮೊದಲ ರಾತ್ರಿ; ಹಲವು ತಿಂಗಳುಗಳ ಅಗಲಿಕೆಯ ಕಾರಣದಿಂದ ಇಬ್ಬರೂ ಉತ್ಸುಕತೆಯಿಂದ ನಿರೀಕ್ಷಿಸುತ್ತಿದ್ದ ರಾತ್ರಿ; ಸರಸಸಲ್ಲಾಪದಿಂದಲೇ ಮೊದಲಾದ ರಾತ್ರಿ.

"ನಿನಗಾಗಿ ಮದರಾಸಿನಿಂದ ತಂದಿದ್ದೇನೆ" ಎಂದು ಕೃಷ್ಣಸ್ವಾಮಿ ಸೀರೆಯನ್ನೂ ಜಾಕೆಟ್ ಬಟ್ಟೆಯನ್ನೂ ಮಂಚದ ಮೇಲೆ ಕಾಲನ್ನು ಇಳಿಯ ಬಿಟ್ಟುಕೊಂಡು ಕುಳಿತಿದ್ದ ಮಡದಿಯ ತೊಡೆಯ ಮೇಲೆ ಇಟ್ಟ.

"ನೀವು ಸೀರೆ ತರುವುದು ನನಗೆ ಗೊತ್ತಿದ್ದಿದ್ದರೆ ಒಳ್ಳೆಯ ಖಾದಿ ಸೀರೆ ತೆಗೆದುಕೊಂಡು ಬನ್ನಿ ಅಂತ ಬರೆಯುತ್ತಿದ್ದೆ."

"ನೀನು ಹಾಗೆ ಬರೆದಿದ್ದರೆ ನಾನು ಏನನ್ನೂ ತರುತ್ತಿರಲಿಲ್ಲ. ಇದು ನಿನಗೆ ಚೆನ್ನಾಗಿ ಒಪ್ಪುತ್ತೆ ಅಂತ ತಂದೆ"

"ಯಾಕೆ, ನಾನು ಉಟ್ಟಿರುವ ಖಾದಿ ಸೀರೆ ಏನಾಗಿದೆ? ಚೆನ್ನಾಗಿಲ್ಲವೆ?"

"ಮುತ್ತೈದೆಯರು ಬಿಳಿ ಸೀರೆ ಉಡುತ್ತಾರೆಯೆ? ಅವಲಕ್ಷಣ."

"ನಿಮ್ಮ ಸೀರೆಯೂ ಅವಲಕ್ಷಣ. ಅದಕ್ಕೆ ಅಂಚೇ ಇಲ್ಲ. ಅದನ್ನು ಉಡಬಹುದೆ?"

"ನಾನೇ ಮೆಚ್ಚಿ ನಿನಗೆ ಪ್ರೀತಿಯಿಂದ ಆಶೀರ್ವಾದಪೂರ್ವಕವಾಗಿ ಕೊಡುತ್ತಿದೇನೆ. ಉಡಬಹುದು."

"ಇದನ್ನು ನಮ್ಮ ತಂದೆ ಪ್ರೀತಿಯಿಂದಲೇ ತರಿಸಿ ಕೊಟ್ಟಿದಾರೆ. ಅವರು ಹರಸಿ ಕೊಟ್ಟ ಇದನ್ನು ಉಡಬಾರದೆ?"

"ಆಗಬಹುದು. ನಿನ್ನ ಸಂತೋಷ; ಬೇಡ ಎನ್ನುವುದಿಲ್ಲ. ನನ್ನ ಸಂತೋಷಕ್ಕಾಗಿ ಇದನ್ನೂ ಉಡಬಹುದಲ್ಲ?" ಎಂದು ನಗುತ್ತಲೇ ಕೇಳಿದನವನು.

"ಉಡುವುದಿಲ್ಲ ಎಂದರೆ?—" ಅವಳು ನಗುತ್ತಲೇ ಹೇಳಿದಳು.

"ನಾನು ಹೇಳಿದ್ದಕ್ಕೆ ಒಂದು ದಿವಸವೂ ಎದುರಾಡುತ್ತಿರಲಿಲ್ಲ. ಇದೇನು, ಇಂದು ಕಟ್ಟಿಹೋಗಿದ್ದ ಬಾಯಿ ಬಿಚ್ಚಿರುವುದೂ ಅಲ್ಲದೆ ಕಚ್ಚುವುದಕ್ಕೂ ಬರುತ್ತ ಇದೆ? ಇದನ್ನು ಯಾರೇ ನಿನಗೆ ಕಲಿಸಿದವರು?" ಎಂದು ಸಂತೋಷಗೊಂಡೇ ಕೇಳಿದ.

"ಮಹಾತ್ಮ ಗಾಂಧಿ."

"ಗಂಡನ ಇಚ್ಛೆಗೆ ವಿರುದ್ಧವಾಗಿ ನಡೆಯುವುದು ಪಾತಿವ್ರತ್ಯ ಎಂದು ಆ ಮಹಾತ್ಮನ ಮರುಳು ಮಾತೋ?"

"ನಿಮ್ಮನ್ನೂ ನನ್ನ ಕಡೆಗೆ ಒಲಿಸಿಕೊಂಡರೆ ವಿರೋಧವೆಲ್ಲಿ ಬಂತು?"

"ಹಾಗೆ ಒಲಿಸಿಕೊಂಡರೆ ಆಗುವ ಪ್ರಯೋಜನ ಏನು?"

"ದೇಶಸೇವೆ."

"ದೇಶಸೇವೆ ಹೆಚ್ಚೋ ಪತಿಸೇವೆ ಹೆಚ್ಚೋ?"

" ನನಗೆ ತಿಳಿಯದು."

" ಅಲ್ಲ, ಎಂದೂ ಇಲ್ಲದ್ದು ಇಷ್ಟು ಮಾತಾಡಲು ಕಲಿತಿರುವವಳಿಗೆ ಉತ್ತರ ಹೇಳುವುದಕ್ಕೆ ಬರುವುದಿಲ್ಲವೆ ? "

" ಪತಿಸೇವೆಗೆ ವಿರುದ್ಧವಾಗದ ರೀತಿಯಲ್ಲಿ ದೇಶಸೇವೆ ಮಾಡುವುದರಿಂದ ಕೆಡುಕಿಲ್ಲ."

" ಪತಿಸೇವೆ ಎಂದರೆ ಪತಿಯ ಇಚ್ಛೆಗೆ ಅನುಸಾರವಾಗಿ ನಡೆದು ಕೊಳ್ಳುವುದು ತಾನೆ? ನೀನು ಈ ಸೀರೆ ಉಟ್ಟುಕೊಳ್ಳಬೇಕು ಅಂತ ನನ್ನ ಇಚ್ಛೆ."

" ಕೊಡುವುದು ನಿಮ್ಮ ಇಷ್ಟ. ಉಡುವುದು ಬಿಡುವುದು ನನ್ನ ಇಷ್ಟ."

" ನೀನು ಉಡಬೇಕು, ಅದನ್ನು ನೋಡಿ ನಾನು ಸಂತೋಷ ಪಡಬೇಕು—ಇದು ನನ್ನ ಇಷ್ಟ. ನಾಳೆಯೇ ಉಡಬೇಕು "

" ನಿಮ್ಮ ಇಷ್ಟಕ್ಕಾಗಿ ಬೇಕಾದರೆ ಉಡುತ್ತೇನೆ. ಮನಃಪೂರ್ವಕವಾಗಿ ಉಡಲಾರೆ."

ಕೃಷ್ಣಸ್ವಾಮಿಗೆ ಅಸಮಾಧಾನವೇ ಆಯಿತು " ಹಾಗಾದರೆ ಬೇಡ. ಇದನ್ನು ಅಂಗಡಿಯವರಿಗೆ ಹಿಂದಕ್ಕೆ ಕೊಟ್ಟುಬಿಡುತ್ತೇನೆ " ಎಂದು ಸೀರೆ ಯನ್ನೂ ಬಟ್ಟೆಯನ್ನೂ ಸೆಳೆದುಕೊಂಡು, ತನ್ನ ಟ್ರಂಕಿನೊಳಕ್ಕೆ ತುರುಕಿದ.

" ಯಾಕೆ, ಸಿಟ್ಟು ಬಂತೆ ? " ಎಂದು ನಗುತ್ತ ಕೇಳಿದಳು ಭಾಗ್ಯಲಕ್ಷ್ಮಿ.

" ಹೋಗಲಿ ಬಿಡು. ಮುಂದೆ ನಿನಗೆ ಸೀರೆ ತರುವುದೇ ತಪ್ಪಿತು. ನೀನೇ ನೂತು, ನಿನ್ನ ಸೀರೆಯನ್ನು ನೀನೇ ನೇದುಕೊ. ಮನೆಯಲ್ಲಿ ಒಂದು ಮಗ್ಗ ಹೂಡಿದರಾಯಿತು " ಎಂದು ಅವನೂ ನಕ್ಕ. ಮತ್ತೆ ಅವಳೂ ನಕ್ಕಳು.

ಕ್ಷಣಕಾಲ ಮಾತ್ರ ಕೃಷ್ಣಸ್ವಾಮಿ ಮಡದಿಯ ಸೆಳೆತಕ್ಕೆ ಸೋತ. ವಿರಸಕ್ಕೆ ತಿರುಗಿದ್ದ ಮಾತು ಮತ್ತೆ ಸರಸದಲ್ಲಿ, ದಾಂಪತ್ಯದ ಸವಿಯಲ್ಲಿ, ಕೊನೆಗೊಂಡಿತು.

ಮತ್ತೆ, ಆ ಮಾತು ಈ ಮಾತು ಆಡುತ್ತ ಕೃಷ್ಣಸ್ವಾಮಿ ಶಾಮಣ್ಣನ ಹೆಸರೆತ್ತಿದ.

"ನಿನಗೆ ಪುಸ್ತಕ ತಂದುಕೊಡುವ ಹಾಗೆ ಶಾಮಣ್ಣನಿಗೆ ತಿಳಿಸಿದ್ದೆ. ತಂದುಕೊಟ್ಟನೇನು ?"

"ಹ್ಞಾ. ತಂದುಕೊಟ್ಟ."

"ಅಲ್ಲಿದೆಯಲ್ಲ, ಆ ಚರಕವನ್ನೂ ಅವನೇ ತಂದುಕೊಟ್ಟದ್ದು ಅಂತ ಕಾಣುತ್ತೆ."

"ಹೌದು."

"ಅವನು ಇನ್ನೂ ಅಂಗಡಿ ಇಟ್ಟುಕೊಂಡಿದಾನೆಯೋ ಇಲ್ಲ ಮುಚ್ಚಿಬಿಟ್ಟನೋ ?"

"ಸದ್ಯಕ್ಕೆ ಮುಚ್ಚಿದ ಹಾಗೆಯೇ."

"ಯಾಕೆ ?"

"ಸತ್ಯಾಗ್ರಹದ ಚಳವಳಿಗೆ ಸೇರಿಕೊಂಡು, ಅಂಗಡಿ ಮುಚ್ಚಿಕೊಂಡು ಹೋದ. ಜೈಲಿಗೇ ಹೋದನೋ ಏನೋ, ಅವನ ಸುದ್ದಿಯೇ ಇಲ್ಲ."

"ಸರಿ, ಜೈಲಿಗೆ ಹಾಕದೆ ಇರುತ್ತಾರೆಯೇ. ಒರಟು ಖಾದಿ ಬಟ್ಟೆ ಧರಿಸಿ, ಸತ್ಯಾಗ್ರಹ ಮಾಡಿ, ಉಪವಾಸ ಮಾಡಿ, ಜೈಲಿಗೆ ಹೋದರೆ ಸ್ವರಾಜ್ಯ ಸಿಕ್ಕುತ್ತದೆಯೇ ? ಇಷ್ಟಕ್ಕೂ ಸ್ವರಾಜ್ಯ ಬಂದು ನಮಗೆ ಆಗಬೇಕಾದದ್ದೇನು ? ಇಂಗ್ಲೀಷಿನವರು ಇರುವುದೇ ಮೇಲು. ಅಂತೂ ಶಾಮಣ್ಣ ಊರಿನಲ್ಲಿ ಇಲ್ಲ ಅಂತ ತಿಳಿದಹಾಗಾಯಿತು. ನಾಳೆ ಬೆಳಗ್ಗೆ ಅವನ ಅಂಗಡಿ ಕಡೆ ಹೋಗೋಣ ಅಂತ ಮಾಡಿಕೊಂಡಿದ್ದೆ."

"ಅಂಗಡಿಯ ಬೀಗದ ಕೈಯನ್ನು ನಮ್ಮ ಮನೆಯಲ್ಲೆ ಬಿಟ್ಟು ಹೋಗಿದಾನೆ. ಕೆಲವು ಕಾಲ ಕಾದು ನೋಡಿ, ಅವನು ಹಿಂದಕ್ಕೆ ಬರದೆ ಹೋದರೆ, ನಂಬಿಕೆಯಾದ ಯಾರಿಗಾದರೂ ಅಂಗಡಿ ವಹಿಸಿಕೊಡಿ ಎಂದು ಹೇಳಿ ಹೋಗಿದಾನೆ."

"ಓಹೋ, ಹಾಗಾದರೆ ಶಾಮಣ್ಣ ಈಗ ನಿಮ್ಮ ಮನೆಯವನೇ ಆಗಿಹೋದ !"

"ನಮ್ಮ ತಂದೆಗೆ ಅವನನ್ನ ಕಂಡರೆ ತುಂಬ ವಿಶ್ವಾಸ ಈಗ. ಸತ್ಯಾಗ್ರಹ ಚಳವಳಿಗೆ ಹೋಗುವುದು ಮಾತ್ರ ಅವರಿಗೆ ಇಷ್ಟವಿರಲಿಲ್ಲ. 'ಅಂಗಡಿಯನ್ನೆ ಅಭಿವೃದ್ಧಿಪಡಿಸಿಕೊ, ಬೇಕಾದರೆ ನಾನೂ ಸ್ವಲ್ಪ ಬಂಡವಾಳ

ಕೊಡುತ್ತೇನೆ' ಎಂದರು. ಮದುವೆ ಮಾಡಿಕೋ ಎಂದು ಬಲವಂತ ಮಾಡಿದರು.''

"ಜೈಲಿಗೆ ಹೋಗುವವನಿಗೆ ಮದುವೆ ಬೇರೆ ಒಂದು ಕೇಡು. ಅವನು ಮದುವೆ ಮಾಡಿಕೊಂಡು ಜೈಲಿಗೆ ಹೋಗಿ ಕೂತರೆ ಹೆಂಡತಿಯೊಡನೆ ಸಂಸಾರ ಮಾಡುವುದಾದರೂ ಏನು?''

ಭಾಗ್ಯಲಕ್ಷ್ಮಿಗೆ ನಗು ಬಂದಿತು. ತಡೆಯಲಾಗದೆ ನಕ್ಕುಬಿಟ್ಟಳು.

"ಯಾಕೆ, ನಕ್ಕದ್ದು?'' ಎಂದು ಕೇಳಿದ ಕೃಷ್ಣಸ್ವಾಮಿ.

"ಈಗ ನೀವು ಸಂಸಾರ ಮಾಡುತ್ತಿಲ್ಲವೆ, ಹಾಗೆ.''

ಈ ಮಾತಿಗೆ ಕೃಷ್ಣಸ್ವಾಮಿ ಸಹಜವಾಗಿ ಕೋಪಗೊಳ್ಳಬೇಕು. ಆದರೆ ಕೋಪಗೊಳ್ಳಲಿಲ್ಲ. ಅವಳ ಕೆನ್ನೆಯನ್ನು ಮೆಲ್ಲನೆ ಚಿವುಟಿದ.

## ೧೬
## ಮರೆಯ ಮುನಿಸು

ಕೃಷ್ಣಸ್ವಾಮಿ ಮೈಸೂರಿಗೆ ಬಂದು ಎರಡು ಮೂರು ದಿನಗಳಾಗಿದ್ದುವು. ಒಂದು ದಿನ ಬೆಳಗ್ಗೆ ಹೊತ್ತಿಗೆ ಮುಂಚೆಯೇ ರಾಮಮೂರ್ತಿ ತನ್ನ ತಂದೆಯನ್ನು, "ಕ್ಷೌರ ಮಾಡಿಸಿಕೊಳ್ಳುವುದಕ್ಕೆ ದಿನ ಚೆನ್ನಾಗಿದೆಯೇ ಅಪ್ಪ?" ಎಂದು ಕೇಳಿದ. ಅವರು, "ಚೆನ್ನಾಗಿದೆ ಮಾಡಿಸಿಕೋ" ಎಂದರು. ಕ್ಷೌರಕ್ಕೆ ಪ್ರಶಸ್ತವಾದ ದಿನ ವಿಚಾರಿಸುವ ಆಚಾರಶೀಲನಾದ ತಮ್ಮ ಮಗ ಕ್ರಾಪು ಬಿಡಿಸುವ 'ಅನಾಚಾರ'ಕ್ಕೆ ನುಗ್ಗುತ್ತಾನೆಂದು ಅವರಿಗೆ ಆ ಕ್ಷಣದಲ್ಲಿ ಹೊಳೆಯಲಿಲ್ಲ. ರಾಮಮೂರ್ತಿ ಲ್ಯಾನ್ಸ್‌ಡೌನ್ ಬಜಾರಿನಲ್ಲಿದ್ದ ಒಂದು ನವೀನ ಆಯುಷ್ಕರ್ಮ ಶಾಲೆಗೆ ಹೋಗಿ ಕ್ರಾಪು ಮಾಡಿಸಿಕೊಂಡು ಬಂದೇ ಬಿಟ್ಟ! ಅವನು ಹಿಂತಿರುಗಿ ಬರುವ ಹೊತ್ತಿಗೆ ಒಂಬತ್ತು ಗಂಟೆಯ ಸಮಯವಿರಬಹುದು. ಅದಕ್ಕೆ ಹತ್ತುಪ್ಪತ್ತು ನಿಮಿಷಗಳ ಹಿಂದೆ ಕೃಷ್ಣಸ್ವಾಮಿ ಸ್ನಾನ ಮಾಡಿ, ಕಾಫಿ ತಿಂಡಿ ಸೇವಿಸಿ, ಹೊರಕ್ಕೆ ಹೊರಟಿದ್ದನು. ಅವನು ಹೊರಕ್ಕೆ ಹೊರಟದ್ದುದನ್ನು ನಾರಾಯಣಮೂರ್ತಿಗಳು ಗಮನಿಸಿದ್ದರು. ಅವನು ಹಣದ ಪರ್ಸನ್ನು ಮರೆತಿದ್ದು, ಅದನ್ನು ತೆಗೆದುಕೊಂಡು

ಹೋಗಲು ಹಿಂದಿರುಗಿ, ತನ್ನ ಕೋಣೆಯಲ್ಲಿ ಅದಕ್ಕಾಗಿ ಹುಡುಕಾಡು ತ್ತಿದ್ದನು. ಅವನು ಹಾಗೆ ಹಿಂದಿರುಗಿದ್ದನ್ನು ನಾರಾಯಣಮೂರ್ತಿಗಳು ಅರಿಯರು, ಪಾಪ! ಆ ವೇಳೆಗೆ ಸರಿಯಾಗಿ ಕ್ರಾಪು ಬಿಡಿಸಿಕೊಂಡಿದ್ದ ರಾಮಮೂರ್ತಿ ಹಜಾರಕ್ಕೆ ಕಾಲಿಟ್ಟನು. ಅವನು ತಾಯಿತಂದೆಗಳ ಮುನಿಸನ್ನು ನಿರೀಕ್ಷಿಸಿ ಅದನ್ನು ಎದುರಿಸಲು ಸಿದ್ಧನಾಗಿಯೇ ಒಳಕ್ಕೆ ಬಂದು, "ಲೋ, ವೆಂಕಟೇಶಾ, ಸ್ನಾನಕ್ಕೆ ನೀರು ಹಾಕೋ'' ಎಂದು ಕೂಗಿದ. ಅವನು ಒಳಕ್ಕೆ ಬಂದಾಗ ನಾರಾಯಣಮೂರ್ತಿಗಳು ಹಜಾರದಲ್ಲಿಯೇ ಇದ್ದರು.

"ಏನೋ ಇದು, ನಿನ್ನ ಅವತಾರ?" ಎಂದು ಕೆರಳಿ ಕೇಳಿದರು ನಾರಾಯಣಮೂರ್ತಿಗಳು. ಅವರು ಸ್ವಾಭಾವಿಕವಾಗಿ ಸೌಮ್ಯಮೂರ್ತಿಗಳು, ಶಾಂತಚಿತ್ತರು. ಅಂಥವರೂ ಈಗ ಮಿತಿಮೀರಿ ಕೆರಳಿದ್ದರು.

ರಾಮಮೂರ್ತಿ ಮೌನದಿಂದ ತಲೆತಗ್ಗಿಸಿ ನಿಂತಿದ್ದ.

"ಇದು ಏನೂ ಅಂದೆ! ನಿನಗೆ ಹೇಳುವವರು ಕೇಳುವವರು ಯಾರೂ ಇಲ್ಲವೋ?''

ರಾಮಮೂರ್ತಿ ಮೌನವಾಗಿಯೇ ಇದ್ದ. ಈ ಮಾತುಗಳು ಕೃಷ್ಣ ಸ್ವಾಮಿಯ ಕಿವಿಗೆ ಬಿದ್ದು, ಏನು ಸಮಾಚಾರವಿರಬಹುದೆಂದು ಹೊರಕ್ಕೆ ಬರಬೇಕೆಂದಿರುವಷ್ಟರಲ್ಲಿ ನಾರಾಯಣಮೂರ್ತಿಗಳು ಎತ್ತಿದ ಕ್ರಾಪಿನ ಸುದ್ದಿಯನ್ನು ಕೇಳಿ, ಅವನು ಹೊರಕ್ಕೆ ಮುಖ ಹಾಕದೆ ಕೋಣೆಯಲ್ಲೇ ಕುಳಿತುಬಿಟ್ಟ.

"ಲೇ, ನಿನ್ನ ಮಗ ಕ್ರಾಪು ಬಿಡಿಸಿಕೊಂಡು ಬಂದಿದ್ದಾನೆ, ನೋಡು ಬಾ. ನೋಡಿ, ಹೊಟ್ಟೆಗೆ ಹಾಲು ಹುಯ್ದುಕೋ" ಎಂದು ನಾರಾಯಣ ಮೂರ್ತಿಗಳು ಆರ್ಭಟಿಸಿದರು.

ಗೌರಮ್ಮನವರು, ಜಯಲಕ್ಷ್ಮಮ್ಮನವರು, ಭಾಗ್ಯಲಕ್ಷ್ಮಿ ಎಲ್ಲರೂ ಅಡಿಗೆಯ ಕೋಣೆಯಿಂದ ಏನೋ ಅನಾಹುತ ನಡೆದಂತೆ ಧಾವಿಸಿ ಬಂದರು. ಕೃಷ್ಣಸ್ವಾಮಿ ಕೋಣೆಯಲ್ಲಿದ್ದುದನ್ನು ಯಾರೂ ಅರಿಯರು.

ಎಲ್ಲರಿಂದಲೂ ಬಯ್ಗುಳ, ಭರ್ತ್ಸನೆ, ಬೋಧನೆ—ಇವು ಕ್ರಮವಾಗಿ ಸಾಂಗವಾಗಿ ನೆರವೇರಿದುವು.

"ಮುಟ್ಠಾಳ, ಯಾರೋ ಇದನ್ನು ನಿನಗೆ ಕಲಿಸಿ ಕೊಟ್ಟವರು?" ನಾರಾಯಣಮೂರ್ತಿಗಳೆಂದರು.

"ಕಪಿಗೆ ಏಣಿ ಹಾಕಿಕೊಡಬೇಕೆ?" ಎಂದರು ಜಯಲಕ್ಷಮ್ಮನವರು.

"ನನಗೆ ಆಗಲೇ ಅನ್ನಿಸಿತ್ತು. ಕೃಷ್ಣಸ್ವಾಮಿಯನ್ನು ನೋಡಿಕೊಂಡು ಇವನೂ ಅವನ ದಾರಿ ಹಿಡೀತಾನೆ ಅಂತ! ಆದರೆ ಈಹೊತ್ತೆ ಹೀಗೆ ಮಾಡಿಕೊಳ್ಳುತ್ತಾನೆ ಅಂತ ಯಾರಿಗೆ ಗೊತ್ತಾಗಬೇಕು?" ಎಂದರು ನಾರಾಯಣಮೂರ್ತಿಗಳು.

ಗೌರಮ್ಮನವರೆಂದರು: "ರಾಮಮೂರ್ತಿ, ನಿನ್ನ ಜುಟ್ಟು ಎಷ್ಟು ಚೆನ್ನಾಗಿತ್ತಪ್ಪ! ಮಾರುದ್ದ ಮಂಡೆಯನ್ನು ಆ ಹಾಳು ಕ್ಷೌರದವನಿಗೆ ಹರಕೆ ಒಪ್ಪಿಸಿದ ಹಾಗೆ ಕೊಟ್ಟು ಬಂದೆಯಲ್ಲೋ."

ಭಾಗ್ಯಲಕ್ಷ್ಮಿ ತಮ್ಮನ ಮೇಲೆ ಮರುಕದಿಂದ ನುಡಿದಳು: "ಸರಿ, ಅವನನ್ನ ಯಾಕೆ ಬಯ್ಯುತ್ತೀರಿ, ಪಾಪ. ಈಗಿನ ಕಾಲದವರೆಲ್ಲಾ ಹೀಗೇ. ಅವರೇ ಮಾಡಿಸಿಕೊಂಡಿದಾರಂತೆ, ಇನ್ನು ಚಿಕ್ಕಪುಟ್ಟ ಹುಡುಗರಿಗೆ ಆಸೆ ಯಾಗುವುದಿಲ್ಲವೆ?"

"ಹೌದು ಹೌದು, ಭಾವನ್ನ ನೋಡಿದ ಮೇಲೆಯೇ ಅವನಿಗೆ ಹಾಗೆ ಅನ್ನಿಸಿರಬೇಕು. ಎತ್ತಲಾಗಾದರೂ ಹಾಳಾಗಿ ಹೋಗಲಿ, ಸುಮ್ಮನಿರಿ."— ಜಯಲಕ್ಷಮ್ಮನವರು ದನಿಗೂಡಿಸಿದರು.

"ಯಾಕೆ ಸುಮ್ಮನಿರಲಿ ಅಂತ. ಕೃಷ್ಣಸ್ವಾಮಿಯ ಮೇಲೆ ನನಗೆ ಅಧಿಕಾರ ಇಲ್ಲ. ಅವನು ಏನಾದರೂ ಮಾಡಿಕೊಳ್ಳಲಿ, ಎತ್ತಲಾಗಾದರೂ ಹಾಳಾಗಿ ಹೋಗಲಿ. ಕ್ರಾಪನ್ನಾದರೂ ಬಿಡಿಸಿಕೊಳ್ಳಲಿ ಕೆಟ್ಟದಾರಿಯನ್ನಾದರೂ ಹಿಡಿಯಲಿ. ಇವನು ಮಾಡಬಾರದ್ದನ್ನ ಮಾಡಿದರೆ ನಾನು ನೋಡುತ್ತ ಸುಮ್ಮನೆ ಕುಳಿತಿರಲೆ?" ಎಂದು ಮಗನ ಮೇಲೆ ರೇಗಿ ಅಳಿಯನ ಮೇಲಣ ಅಸಮಾಧಾನವನ್ನು ತೀರಿಸಿಕೊಂಡರು. ಅವರು ಕೃಷ್ಣಸ್ವಾಮಿಯನ್ನು ನಿರ್ದೇಶಿಸಿ ನುಡಿದದ್ದು ಯಾರಿಗೂ, ಭಾಗ್ಯಲಕ್ಷ್ಮಿಗೂ ಕೂಡ, ಅಪ್ರಕೃತವಾಗಿಯಾಗಲಿ ಅಸಂಗತವಾಗಿಯಾಗಲಿ ಕಾಣಬರಲಿಲ್ಲ. ಆದರೆ, ಅವರ ನುಡಿಗಳು ಕೋಣೆಯಲ್ಲಿದ್ದ ಕೃಷ್ಣಸ್ವಾಮಿಯ ಮನಸ್ಸನ್ನು ಕಾದ ಕಬ್ಬಿಣದಂತೆ ಚುಚ್ಚಿದುವು.

ನಾರಾಯಣಮೂರ್ತಿಗಳ ರೇಗಾಟ ಹಾರಾಟ ಅಷ್ಟಕ್ಕೇ ಮುಗಿಯ ಲಿಲ್ಲ: ಇನ್ನಷ್ಟು ಮುಂದುವರಿಯಿತು. ಗೌರಮ್ಮನವರು ಸಮಾಧಾನ ಪಡಿಸಿದಮೇಲೆ ಅವರು ಸುಮ್ಮನಾದರು; ನುಂಗಿಕೊಂಡ ಕೋಪದ ಭರದಲ್ಲಿ ಹೊರಕ್ಕೆ ಎದ್ದು ಹೋದರು.

ವೆಂಕಟೇಶ ಎಲ್ಲೋ ಹೊರಕ್ಕೆ ಹೋಗಿದ್ದ; ಮನೆಯಲ್ಲಿರಲಿಲ್ಲ. ಆದ್ದರಿಂದ, ತಮ್ಮನಿಗೆ ಸ್ನಾನಕ್ಕೆ ನೀರು ಹಾಕುವುದಕ್ಕಾಗಿ ಭಾಗ್ಯಲಕ್ಷ್ಮಿ ಬಚ್ಚಲಮನೆಯ ಕಡೆ ಹೊರಟಳು. ಗೌರಮ್ಮನವರೂ ಜಯಲಕ್ಷಮ್ಮನವರೂ ಅಡಿಗೆಯ ಮನೆಗೆ ಹೋದರು. ಕೃಷ್ಣಸ್ವಾಮಿ ಕೋಣೆಯಿಂದ ಹೊರ ಹೊರಟದ್ದನ್ನು ಯಾರೂ ಕಾಣಲೇ ಇಲ್ಲ. ನಾರಾಯಣಮೂರ್ತಿಗಳ ಅನುದ್ದಿಷ್ಟವಾದ ಮಾತುಗಳು ಅವನನ್ನು ಕೆರಳಿಸಿದ್ದು ಯಾರ ಅರಿವಿಗೂ ಬರಲಿಲ್ಲ. ಅವನಾದರೂ ತನ್ನ ಕೋಪವನ್ನು ನುಂಗಿಕೊಂಡನೇ ಹೊರತು ಹೆಂಡತಿಯಲ್ಲಿ ಕೂಡ ಹೇಳಿಕೊಳ್ಳಲಿಲ್ಲ.

ನುಂಗಿಕೊಂಡ ಕೋಪ ನಾಲ್ಕೈದು ದಿನಗಳಲ್ಲಿ ಕಾರ್ಯರೂಪವಾಗಿ ವ್ಯಕ್ತಗೊಂಡಿತು. ಒಂದು ರಾತ್ರಿ, ನಿಂತ ನಿಲವಿನಲ್ಲೇ "ಬೆಂಗಳೂರಿಗೆ ಹೋಗಿ ಬರುತ್ತೇನೆ" ಎಂದು ಹೇಳಿ ಹೊರಟುಬಿಟ್ಟ. ಅವನು ಸಾಮಾನು ಗಳನ್ನು ಕಟ್ಟಿಕೊಳ್ಳುತ್ತಿದ್ದಾಗ ಅವನ ಚರ್ಯೆಯಿಂದ, ಬಿಗಿತುಕೊಂಡು ಸುಕ್ಕುಗಟ್ಟಿದ್ದ ಮುಖಮುದ್ರೆಯಿಂದ, ಕೃಷ್ಣಸ್ವಾಮಿ ಏನೋ ಅಸಮಾಧಾನ ಗೊಂಡಿದ್ದಾನೆಂದು ಅರಿತಳೇ ಹೊರತು, ಅದಕ್ಕೆ ಕಾರಣ ಗೊತ್ತಾಗಲಿಲ್ಲ. ಕೃಷ್ಣಸ್ವಾಮಿಯ ಮರೆಯ ಮುನಿಸು ಇತರರ ಗಮನಕ್ಕೆ ಬಾರಲೇ ಇಲ್ಲ.

"ಮತ್ತೆ ಬರುವುದು ಯಾವಾಗ?" ಎಂದು ಮೃದುವಾಗಿ ಕೇಳಿದಳು.

"ಯಾವಾಗಲೋ, ಮನಸ್ಸಿಗೆ ಬಂದಾಗ"— ಮೃದುನುಡಿಗೆ ಮೊಳಗಿನ ಉತ್ತರ.

'ಯಾಕೆ ಸಿಟ್ಟು?' ಎಂದು ಕೇಳಬೇಕೆಂದು ಅವಳ ಮನಸ್ಸು. ಕೃಷ್ಣಸ್ವಾಮಿಯ ಸ್ವಭಾವವನ್ನು ಸ್ವಲ್ಪಮಟ್ಟಿಗೆ ಬಲ್ಲ ಅವಳು ಕೇಳಿ ಪ್ರಯೋಜನವಿಲ್ಲವೆಂದು ಸುಮ್ಮನಾದಳು. ತನ್ನಿಂದ ಅವರ ಮನಸ್ಸು ಕೆಡದಿರಲಿ ಎಂಬ ಉದ್ದೇಶದಿಂದ ಮುನಿಸು ತಿಳಿಸಲು ಪ್ರಯತ್ನಪಟ್ಟಳು:

"ಟ್ರಂಕು ಹಾಸಿಗೆ ಎಲ್ಲ ಯಾಕೆ? ಬಲೆಚೀಲದಲ್ಲಿ ಒಂದೆರಡು ಬಟ್ಟೆ ತೆಗೆದುಕೊಂಡು ಹೋದರೆ ಆಗದೆ?"

"ಅಲ್ಲಿ ಎಷ್ಟು ದಿನಸ ಇರಬೇಕಾಗುತ್ತೋ ಗೊತ್ತಿಲ್ಲ. ಜೊತೆಯಲ್ಲಿ ಹೋಗುತ್ತೆ ಜೋತೆಯಲ್ಲಿ ಬರುತ್ತೆ, ಅದರಿಂದ ಬಾಧಕವೇನು?"

"ಅದು ಸರಿ. ಬೇಕಾದರೆ ಸೀರೆ ಇಟ್ಟುಹೋಗಿ ನಿಮಗೆ ತಾನೇ ಯಾಕೆ ಅಸಮಾಧಾನವಾಗಬೇಕು. ಯಾವತ್ತಾದರೂ ಒಂದೊಂದು ದಿನ ಉಟ್ಟರಾಯಿತು."

"ನನ್ನ ಇಷ್ಟಬಂದವರಿಗೆ, ನಿತ್ಯ ಉಡುವವರಿಗೆ, ಯಾರಿಗಾದರೂ ಕೊಡುತ್ತೇನೆ. ನಿಮ್ಮ ಇಷ್ಟವೂ ಅದೇ ತಾನೆ?"

ಕೃಷ್ಣಸ್ವಾಮಿಯ ವ್ಯಂಗ್ಯನುಡಿಗಳು ಭಾಗ್ಯಲಕ್ಷ್ಮಿಗೆ ಅರ್ಥವಾಗಲಿಲ್ಲ "ನಿಮ್ಮ ಇಷ್ಟಬಂದಹಾಗೆ ಮಾಡಿ" ಎಂದು ಸುಮ್ಮನಾದಳು.

## ೧೭

## ಮನಸ್ಸು ಹುಳಿಯಾಯಿತು

ಬೇಸಗೆಯ ರಜದಲ್ಲಿ ಮೈಸೂರಿನಲ್ಲೇ ಉಳಿದುಕೊಳ್ಳುವುದೋ ಇಲ್ಲವೆ ಬೆಂಗಳೂರಿನಲ್ಲಿರುವುದೋ ಎಂದು ಕೃಷ್ಣಸ್ವಾಮಿಯ ಮನಸ್ಸು ತೂಗಾಡುತ್ತಿತ್ತು. ಮೈಸೂರಿನಲ್ಲೇ ಇದ್ದುಕೊಂಡು ಮಾವನವರಿಂದ ತನಗೆ ಸಲ್ಲುತ್ತಿದ್ದ ತಿಂಗಳ ತಿಂಗಳ ಹಣವನ್ನು ನಿರೀಕ್ಷಿಸುವುದಾದರೂ ಹೇಗೆ? ಕೆಲಸವಿದೆಯೆಂದು ಮದರಾಸಿಗೇ ಹೊರಟು ಹೋದರೆ, ಮಾವನವರು ಎಂದಿನಂತೆ ತನಗೆ ಹಣ ಕಳಿಸುವರು. ಆದರೆ ಬೇಸಗೆಯಲ್ಲಿ ಮದರಾಸಿನಲ್ಲಿ ರುವುದು ದುಸ್ಸಾಧ್ಯವೆಂದು ಬಗೆದು ಕೆಲವು ಕಾಲ ಬೆಂಗಳೂರಿನಲ್ಲಿ ಕಳೆಯ ಬೇಕೆಂದು ಅವನು ಯೋಚಿಸುತ್ತಿದ್ದ. ಬೆಂಗಳೂರಿನಲ್ಲಿ ಚಂದ್ರಶೇಖರಯ್ಯ ನನ್ನು ಬಿಟ್ಟರೆ ಹತ್ತಿರದ ಬಂಧು ಬಳಗದವರಾರೂ ಇರಲಿಲ್ಲ. ಅವನ ಮನೆಗೆ ಹೋಗಲು ಕೃಷ್ಣಸ್ವಾಮಿಗೆ ಮುಖವಿಲ್ಲ. (ನಾನಂತೂ ಅವನ ನೆನಪಿನಿಂದ ಜಾರಿಯೇ ಹೋಗಿದ್ದೆನೆಂದು ಕಾಣುತ್ತದೆ.) ಮೈಸೂರಿಗೆ

ಬಂದ ಮೇಲೆ ಶಾಮಣ್ಣ ಸತ್ಯಾಗ್ರಹದ ಚಳವಳಿಗೆ ಸೇರಿರುವನೆಂದು ಕೇಳಿ ತಿಳಿದು, ಮೈಸೂರಿನಲ್ಲಿಯೂ ಕಾಲ ಕಳೆಯುವುದು ಕಷ್ಟವೆಂದು ತೋರಿರ ಬೇಕವನಿಗೆ ಕಡೆಯಪಕ್ಷ ಹದಿನೈದು ಇಪ್ಪತ್ತು ದಿನಗಳವರೆಗಾದರೂ ಮೈಸೂರಿನಲ್ಲಿಯೇ ಅವನು ಇರುತ್ತಿದ್ದನೆಂದು ಕಾಣುತ್ತದೆ. ಆದರೆ, ಮಾವನವರು ಅನುದ್ದಿಷ್ಟವಾಗಿ ಆಡಿದ ಚುಚ್ಚುನುಡಿಗಳನ್ನು ಕೇಳಿದ ಮೇಲೆ ಅವನ ಮನಸ್ಸು ಸಂಪೂರ್ಣವಾಗಿ ಬದಲಾಯಿಸಿತು. "ಭಾಗ್ಯಲಕ್ಷ್ಮಿಯಲ್ಲಿ ಪ್ರೀತಿಯಿರುವವನಂತೆ ನಟಿಸುತ್ತ ನನಗೆ ನಾನು ಮೋಸ ಮಾಡಿಕೊಳ್ಳುತ್ತಿರುವೆನಲ್ಲಾ! ನಟನೆಯೇ ಆದರೂ, ಪ್ರೀತಿಯಿಂದ ತಂದುಕೊಟ್ಟ ಸೀರೆಯನ್ನು ಬೇಡವೆಂದಳಲ್ಲಾ!" ಎಂದು ಅವನ ಮನಸ್ಸು ಹುಳಿಯಾಯಿತು.

ಮೊದಲು ಬೆಂಗಳೂರಿಗೆ ಹೊರಟ. ಬೆಂಗಳೂರಿನಲ್ಲಿ ಅವನು ಯಾರ ಮನೆಯಲ್ಲಿಯೂ ಇಳಿದುಕೊಂಡಂತೆ ಕಾಣಲಿಲ್ಲ. ಬಹುಶಃ ಯಾವುದೋ ಹೋಟಲಿನಲ್ಲಿ ಇಳಿದುಕೊಂಡಿರಬೇಕು. ಕಾರ್ಯಾಂತರವಾಗಿ ತಾನು ಮದರಾಸಿಗೇ ಹಿಂದಿರುಗಬೇಕಾಗಿದೆಯೆಂದೂ, ಎಂದಿನಂತೆ ಹಣವನ್ನು ಮದರಾಸಿನ ವಿಳಾಸಕ್ಕೇ ಕಳಿಸಬಹುದೆಂದೂ ಅವನು ಬೆಂಗಳೂರಿನಿಂದ ನಾರಾಯಣಮೂರ್ತಿಗಳಿಗೆ ಒಂದು ಕಾಗದ ಬರೆದುಹಾಕಿದ; ಕಾಗದದಲ್ಲಿ ಯಾವ ವಿಳಾಸವನ್ನೂ ಬರೆದಿರಲಿಲ್ಲ. ಅಂಚೆಯ ಮುದ್ರೆಯಿಂದ ಬೆಂಗಳೂರಿನಿಂದ ಬರೆದ ಕಾಗದವೆಂದು ಅವರು ಅರಿತುಕೊಂಡರು. ಅಳಿಯನಿಗೆ ತಾವು ಮುನಿಸು ಉಂಟುಮಾಡಿರುವುದಾಗಿ ಅವರಿಗೆ ಹೊಳೆಯಲು ಕಾರಣವೇ ಇರಲಿಲ್ಲ. ಕೃಷ್ಣಸ್ವಾಮಿಗೆ ನಿಜವಾಗಿ ಏನೋ ಕೆಲಸವಿರಬಹುದೆಂದೇ ಅವರು ಭಾವಿಸಿದರು. ಆದರೆ, ಗಂಡನ ಅನಿರೀಕ್ಷಿತ ಪ್ರಯಾಣಕ್ಕೆ ಏನೋ ಅಸಮಾಧಾನವೇ ಕಾರಣವಿರಬೇಕೆಂದು ಭಾಗ್ಯಲಕ್ಷ್ಮಿಯ ಮನಸ್ಸಿನ ಅಳುಕು; ಆದರೆ ಏನೆಂಬುದನ್ನು ಅರಿಯಳು.

೧೮

## ಪ್ರೀತಿಯ ಉಡುಗೊರೆ

ಕೃಷ್ಣಸ್ವಾಮಿ ಬೆಂಗಳೂರಿನಲ್ಲಿ ಎರಡು ಮೂರು ದಿನಗಳು ಮಾತ್ರ ಇದ್ದನೆಂದು ಕಾಣುತ್ತದೆ ಅವನು ಅಲ್ಲಿ ಇದ್ದ ಕಾಲದಲ್ಲಿ ಒಂದು ಅವಿವೇಕದ ಕೆಲಸ ಮಾಡಿದ.

ತಾನು ಮದರಾಸಿನಿಂದ ಭಾಗ್ಯಲಕ್ಷ್ಮಿಗೆಂದು ತಂದಿದ್ದ ಸೀರೆಯನ್ನೂ ಕುಪ್ಪಸದ ಬಟ್ಟೆಯನ್ನೂ ರುಕ್ಮಿಣಿಯ ಹೆಸರಿಗೆ ಭಾಂಗಿ ಮಾಡಿ ಕಳಿಸಿದ. ತನ್ನ ಹೆಸರಿಗೆ ಬಂದ ಭಾಂಗಿಯನ್ನು ಸ್ವೀಕರಿಸಿ, ರುಕ್ಮಿಣಿ ಅದನ್ನು ಬಿಚ್ಚಿ ನೋಡಿದಳು—ಒಳಗೆ ಸೀರೆ, ಕುಪ್ಪಸದ ಬಟ್ಟೆ! ಅವಳಿಗೆ ಆಶ್ಚರ್ಯ ವಾಯಿತು. ಸೀರೆ ಮತ್ತು ಕುಪ್ಪಸದ ಬಟ್ಟೆಯ ನಡುವೆ ಕೃಷ್ಣಸ್ವಾಮಿಯ ಒಂದು ಫೋಟೋಚಿತ್ರ, ತನ್ನ ಹೆಸರಿಗೆ ಬರೆದಿದ್ದ ಒಂದು ಕವರು—ಇವು ಅವಳ ದೃಷ್ಟಿಗೆ ಬಿದ್ದ ಕೂಡಲೆ ಆಶ್ಚರ್ಯ ಕಳವಳಕ್ಕೆ ಎಡೆಗೊಟ್ಟಿತು. ಅವಳ ಎದೆ ಹೊಯ್ಯಲಾರಂಭಿಸಿತು. ಅವಳಿಗೆ ಏನು ಮಾಡಬೇಕೋ ತೋರಲಿಲ್ಲ.

ಕೃಷ್ಣಸ್ವಾಮಿ ಕಳೆದ ವರ್ಷ ತನಗೆ ಕಾಗದ ಬರೆದಿದ್ದದ್ದು, ಅದರಿಂದ ಆದ ಹಗರಣ—ಇವನ್ನು ನೆನೆದಳು. ಈ ಸಲ ಏನನ್ನೂ ಮರೆಮಾಚುವು ದಿಲ್ಲವೆಂದು ನಿಶ್ಚಯಿಸಿಕೊಂಡ ಮೇಲೆ ಅವಳ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು.

ಚಂದ್ರಶೇಖರಯ್ಯ ಕಚೇರಿಯಿಂದ ಹಿಂದಿರುಗಿದ ಕೂಡಲೆ ರುಕ್ಮಿಣಿ ಕೃಷ್ಣಸ್ವಾಮಿ ಕಳಿಸಿಕೊಟ್ಟಿದ್ದ ಸೀರೆ ಮೊದಲಾದುವನ್ನು ಅವನ ಮುಂದೆ ಸಮಾಧಾನಚಿತ್ತಳಾಗಿಯೇ ಇಟ್ಟಳು. ಎಲ್ಲವನ್ನೂ ಪರಿಶೀಲಿಸಿದ ಮೇಲೆ, ಅವನಿಗೆ ದಿಗ್ಭ್ರಮೆಯಾಯಿತು; ಸ್ವಲ್ಪ ಕೋಪವೂ ಮೂಡಿತು. ರುಕ್ಮಿಣಿಯ ಹೆಸರಿಗೆ ಬರೆದು, ಒಡೆಯದೆ ಇದ್ದ ಕವರನ್ನು ಒಡೆದು ಓದಿಕೊಂಡನವನು.

ರುಕ್ಮಿಣಿ ಕೇಳಿದಳು: "ಕಾಗದ ಓದಿಕೊಂಡಿರಾ?"

"ಓದಿಕೊಂಡೆ."

"ಏನು ಬರೆದಿದ್ದಾನೆ?"

"ಏನು ಬರೆದಿದ್ದಾನೆ ಅಂತ ತಿಳಿಯಲು ಅಷ್ಟು ಕುತೂಹಲವೇನು ನಿನಗೆ? ಅಷ್ಟು ಕುತೂಹಲವಿದ್ದರೆ ನೀನೆ ಒಡೆದು ಓದಿನೋಡಿಕೊಳ್ಳಬಹುದಾಗಿತ್ತಲ್ಲ?"

ಚಂದ್ರಶೇಖರಯ್ಯನ ಮಾತುಗಳಲ್ಲಿ ಎಂದೂ ಎಂದಿನಂತಲ್ಲದೆ ಅನಿರೀಕ್ಷಿತವಾಗಿ ಮಿಂಚುತಿದ್ದ ಕೋಪವನ್ನು ಕಂಡು ರುಕ್ಮಿಣಿಗೆ ವ್ಯಥೆಯಾಯಿತು; ಕಣ್ಣು ಒದ್ದೆಯಾಯಿತು.

"ಅವನ ಮೇಲಿನ ಕೋಪವನ್ನು ನನ್ನ ಮೇಲೆ ತೀರಿಸಿಕೊಳ್ಳಬೇಡಿ, ನಿಮ್ಮ ದಮ್ಮಯ್ಯ. ನಿಮ್ಮ ಆಣೆಗೂ ನಾನು ನಿರ್ದೋಷಿ."—ರುಕ್ಮಿಣಿಯ ಕಣ್ಣುಗಳಲ್ಲಿ ದಳದಳನೆ ನೀರು ಸುರಿಯತೊಡಗಿತು.

"ಹೋಗಲಿ ಬಿಡು, ರುಕ್ಕು. ನೀನು ಹೇಳಿದ್ದು ನಿಜ. ಅವನ ಕೋಪವನ್ನು ನಿನ್ನ ಮೇಲೆ ತಿರಿಸಿಕೊಳ್ಳಹೊರಟೆ" ಎಂದು ಚಂದ್ರಶೇಖರಯ್ಯ ರುಕ್ಮಿಣಿಯ ಮುಂಗುರುಳನ್ನು ಬೆರಳಿನಿಂದ ಆಡಿಸಿದ. ನೂರು ನುಡಿ ಮಾಡಲಾಗದ ಪರಿಣಾಮವನ್ನು ಅವನ ಈ ಒಲವ ತೋರಿಕೆ ಸಾಧಿಸಿ, ಅವಳಿಗೆ ಸಮಾಧಾನವನ್ನೂ ನಂಬಿಕೆಯನ್ನೂ ಧೈರ್ಯವನ್ನೂ ತಂದುಕೊಟ್ಟಿತು. ಅವಳ ಮುಖ ಗೆಲವುಗೂಡಿತು; ಮುಖದಲ್ಲಿ ಒಲವಿನಿಂದ ಬೆಳಗುವ ನಗೆ ಮೂಡಿತು. ಕೆನ್ನೆಯ ಮೇಲೆ ಇನ್ನೂ ಆರದೆ ಇದ್ದ ಕಣ್ಣೀರ ಗೆರೆಗಳು ಒಲವಿನ ನಗೆಯ ಗೆರೆಗಳಿಗೆ ಒಂದು ಪವಿತ್ರತೆಯನ್ನು ಕೊಟ್ಟಿದ್ದುವು. ಇಂಥ ಪವಿತ್ರವಾದ, ನಿಷ್ಕಲ್ಮಷವಾದ, ಮುಚ್ಚುಮರೆಯಿಲ್ಲದ ದಾಂಪತ್ಯ ಪ್ರೇಮವನ್ನು ಸವಿಯುವ ಭಾಗ್ಯ ಭಾಗ್ಯಲಕ್ಷ್ಮಿಯ ಪಾಲಿಗೆ ಮಾತ್ರ ಇಲ್ಲವಾಗಿತ್ತು.

"ರುಕ್ಕು, ನಿನ್ನನ್ನು ಒಂದು ಪ್ರಶ್ನೆ ಕೇಳಬೇಕು ಅಂತ ಬಹುದಿನದಿಂದ ಮನಸ್ಸಿನಲ್ಲಿದೆ. ನೊಂದುಕೊಳ್ಳದೆ ಇದ್ದರೆ ಕೇಳುತೇನೆ."

"ಅದು ಏನು?"

"ನನ್ನನ್ನು ಮದುವೆಯಾಗುವ ಮೊದಲು ಅವನನ್ನು ಮದುವೆಯಾಗಬೇಕೆಂದು ನಿನಗೆ ಆಸೆಯಿತ್ತೆ?"

"ಆಸೆಯೇನಿರಲಿಲ್ಲ. ಹೆಣ್ಣಿಗೆ ಹತ್ತುಕಡೆ ಗಂಡು ನೋಡುತ್ತಾರೆ. ಕೊನೆಗೆ ಯಾರಿಗೋ ಕೊಟ್ಟು ಮದುವೆ ಮಾಡುತ್ತಾರೆ. ಆ ಹೆಣ್ಣು ಹತ್ತು

ಗಂಡುಗಳನ್ನೂ ಆಸೆಪಟ್ಟಿರುತ್ತಾಳೆಯೇ? ನನ್ನನ್ನು ಕೃಷ್ಣಸ್ವಾಮಿಗೆ ಕೊಡಬೇಕೆಂದು ನಮ್ಮ ತಂದೆ ಆಸೆಯಿಟ್ಟುಕೊಂಡಿದ್ದರು, ಅಷ್ಟೆ. ಈ ವಿಚಾರ ಯಾಕೆ ಈಗ, ಹೋಗಲಿ ಬಿಡಿ.''

"ಅದು ಸರಿ. ಅಂತೂ ಕೃಷ್ಣಸ್ವಾಮಿ ನಿನ್ನ ಮೇಲೆ ತುಂಬ ಆಸೆ ಯಿಟ್ಟುಕೊಂಡಿದ್ದ ಹಾಗೆ ಕಾಣುತ್ತೆ. ಆಗ ಹಣಕ್ಕೆ ಬಾಯಿ ಬಿಟ್ಟು ಈಗ ನಿನ್ನ ಮೇಲಿನ ಆಸೆ ಬಿಡಲಾರದೆ ನಿನ್ನನ್ನ ಕಾಡುತ್ತಿದಾನೆ.''

"ನನ್ನನ್ನ ಕಾಡಿ ಅವನು ಏನು ಮಾಡಿಯಾನು ಹೇಳಿ. ಪಾಪ, ಭಾಗ್ಯಲಕ್ಷ್ಮಿಯನ್ನ ಗೋಳುಹುಯ್ದುಕೊಳ್ಳುತ್ತಿದಾನೆ. ಅವನಿಗೆ ಯಾವುದಕ್ಕೆ ಕೊರತೆಯಾಗಿದೆ? ಭಾಗ್ಯಲಕ್ಷ್ಮಿ ಎಂಥ ಚೆಲುವೆ, ಎಷ್ಟು ಒಳ್ಳೆಯವಳು. ಮುಖ್ಯ ಅವಳ ದುರದೃಷ್ಟ.''

"ದುರದೃಷ್ಟವೇನು ದುರದೃಷ್ಟ, ಎಲ್ಲಾ ಸರಿಹೋಗುತ್ತೆ. ಮೂರು ದಿವಸ ಹೀಗೆ ಎಗರಾಡುತ್ತಾನೆ. ಆಮೇಲೆ ತೆಪ್ಪಗಾಗುತ್ತಾನೆ."

"ನನಗೆ ಹಾಗೆ ತೋರುವುದಿಲ್ಲ. ಮನಸ್ಸು ಬೇರೆಯ ಕಡೆ ತಿರುಗಿರು ವಾಗ ಅದು ಹತ್ತು ಕಡೆ ಹರಿಯುಬಹುದು.''

"ಅದಕ್ಕೆ ನಾವೇನು ಮಾಡುವುದಕ್ಕಾಗುತ್ತೆ? ಎತ್ತಲಾಗಾದರೂ ಹಾಳಾಗಿಹೋಗಲಿ. ಆ ವಿಚಾರ ಇರಲಿ. ಇನ್ನುಮೇಲೆ ನಿನ್ನನ್ನ ಕಾಡದಂತೆ ಅವನಿಗೆ ಬುದ್ಧಿ ಕಲಿಸಬೇಕು ಅಂತ ಮಾಡಿಕೊಂಡಿದೇನೆ. ನೀನು ಏನು ಹೇಳುತ್ತೀ?"

"ಅದಕ್ಕೆ ಏನು ಮಾಡಬೇಕು ಅಂತ ನಿಮ್ಮ ಮನಸ್ಸಿನಲ್ಲಿ?''

"ಅವನ ಮಾವನವರಿಗೆ ಒಂದು ಕಾಗದ ಬರೆದರೆ ಅವನಿಗೆ ಚೆನ್ನಾಗಿ ಬುದ್ಧಿ ಕಲಿಸುತ್ತಾರೆ. ನನ್ನ ಮಾತು ಅವನಿಗೆ ಹಿಡಿಯುತ್ತದೆಯೋ ಇಲ್ಲವೋ. ಮೊದಲಿಂದಲೂ ಕಾರಣವಿಲ್ಲದೆಯೇ ನನ್ನ ಮೇಲೆ ಅವನಿಗೆ ಏನೋ ಅಸಮಾಧಾನ.''

"ಪಾಪ, ಅವನ ಮಾವನವರಿಗೆ ಬರೆಯಬೇಡಿ ಅಂದ್ರೆ. ವಿಷಯ ಗೊತ್ತಾದರೆ ಅವರ ಮನೆಯವರು ಎಷ್ಟು ನೊಂದುಕೊಳ್ಳುತ್ತಾರೊ? ಉಪಕಾರ ಮಾಡಹೋಗಿ ಅಪಕಾರವಾದೀತು. ನಾವಾಗಿ ಭಾಗ್ಯಲಕ್ಷ್ಮಿಯ ಸುಖಕ್ಕೆ ಹುಳಿ ಹಿಂಡಿದ ಹಾಗೆ ಆಗುತ್ತೆ."

"ಹಾಗಾದರೆ ಏನು ಮಾಡಬೇಕು ಅನ್ನುತ್ತೀ?"

"ನೀವೇ ಮರ್ಯಾದೆಯಾಗಿ ಅವನಿಗೆ ಒಂದು ಕಾಗದ ಬರೆದುಬಿಡಿ. ನಾಚಿಕೊಂಡು ಸುಮ್ಮನಾದರೂ ಆಗಬಹುದು."

"ನನಗೆ ಇಷ್ಟವಿಲ್ಲ. ನೀನೇ ಬರೆದುಹಾಕು"

"ಏನು ಅಂದ್ರೆ ನೀವು ಹೇಳುವುದು! ಕೃಷ್ಣಸ್ವಾಮಿಗೆ ನಾನು ಕಾಗದ ಬರೆಯುವುದೆ? ನನ್ನ ಮನಸ್ಸನ್ನ ಪರೀಕ್ಷೆ ಮಾಡಬೇಕು ಅಂತ ಹೀಗೆ ಕೇಳುತ್ತೀರೋ?"

"ಹೋಗಲಿ ಬಿಡು. ಇಷ್ಟಕ್ಕೂ ಕಾಗದ ಬರೆದು ಮನಸ್ಸು ತಿದ್ದುವುದಕ್ಕಾಗುತ್ತದೆಯೇ?"

"ನಿಮಗೆ ತೋರಿದ ಹಾಗೆ ಮಾಡಿ. ಅದಿರಲಿ, ಈ ಸೀರೆಯನ್ನ ಏನು ಮಾಡೋಣ?"

"ಪಾಪ, ಪ್ರೀತಿಯಿಂದ ಉಡುಗೊರೆ ಕಳುಹಿಸಿದ್ದಾನೆ, ಉಟ್ಟುಕೊ" ಎಂದು ಚಂದ್ರಶೇಖರಯ್ಯ ಗೊಳ್ಳನೆ ನಕ್ಕ.

"ಸುಮ್ಮನೆ ಹಾಸ್ಯ ಮಾಡಬೇಡಿ ಅಂದ್ರೆ. ಏನು ಮಾಡೋಣ, ಹೇಳಿ?"

ಚಂದ್ರಶೇಖರಯ್ಯ ಆ ವಿಚಾರ ಕುರಿತು ಯೋಚನೆ ಮಾಡಿದ. ಅವನಿಗೆ ಬಗೆ ಹರಿಯಲಿಲ್ಲ. ಕಡೆಗೆ, ಕೃಷ್ಣಸ್ವಾಮಿ ಬೆಂಗಳೂರಿಗೆ ಬಂದಿದ್ದಾಗ ಭಾಗ್ಯಲಕ್ಷ್ಮಿಗಾಗಿ ಸೀರೆಯನ್ನು ತೆಗೆದು, ಯಾವಾಗಲಾದರೂ ಮೈಸೂರಿಗೆ ಹೋದಾಗ ಅದನ್ನು ಅವಳಿಗೆ ತಲುಪಿಸಬೇಕೆಂದು ತನ್ನ ಬಳಿ ಬಿಟ್ಟು ಹೋಗಿರುವುದಾಗಿ ತಿಳಿಸಿ, ಅದನ್ನು ನಾರಾಯಣಮೂರ್ತಿಗಳಿಗೆ ಕಳಿಸಿ ಬಿಡುವುದೆಂದು ಚಂದ್ರಶೇಖರಯ್ಯ ನಿಶ್ಚಯಿಸಿದ. ಅವನ ನಿಶ್ಚಯವನ್ನು ರುಕ್ಮಿಣಿಯೂ ಅನುಮೋದಿಸಿದಳು. ಕೃಷ್ಣಸ್ವಾಮಿ ಮೈಸೂರಿಗೆ ಹಿಂದಿರುಗಿದಾಗ ಭಾಗ್ಯಲಕ್ಷ್ಮಿ ಆ ಸೀರೆ ಉಟ್ಟಿರುವುದನ್ನು ನೋಡಿದರೆ, ತಾನು ಮಾಡಿದ ಕೆಲಸದಿಂದ ಅವನಿಗೆ ನಾಚಿಕೆಯಾಗಿ ಬುದ್ಧಿ ಕಲಿತು ಕೊಳ್ಳುವನೆಂದು ಇಬ್ಬರೂ ಎಣಿಸಿದರು.

## ೧೯
## ಒಲವಿನ ಮಾಣಿಕ ಕೆಂಡವಾಯಿತು

ಚಂದ್ರಶೇಖರಯ್ಯ ತಾನು ತೀರ್ಮಾನಿಸಿದಂತೆ ಸೀರೆಯನ್ನು ಭಾಂಗಿ ಮಾಡಿ ಕಳಿಸಿ, ನಾರಾಯಣಮೂರ್ತಿಗಳಿಗೆ ಒಂದು ಕಾಗದವನ್ನೂ ಬರೆದ. ಕಾಗದದಲ್ಲಿ, ಕೃಷ್ಣಸ್ವಾಮಿಯು ಕೋರಿಕೆಯ ಮೇರೆಗೆ ತಾನು ಸೀರೆಯನ್ನು ಕಳಿಸಿಕೊಟ್ಟಿರುವುದಾಗಿಯೂ, ಅದು ತಲಪಿದ ಬಗ್ಗೆ ಕಾಗದ ಬರೆಯ ಬೇಕಾಗಿಯೂ, ಕೃಷ್ಣಸ್ವಾಮಿಯ ಮದರಾಸಿನ ವಿಳಾಸವನ್ನು ತಿಳಿಸ ಬೇಕೆಂದೂ ಚಂದ್ರಶೇಖರಯ್ಯ ಬರೆದಿದ್ದ.

ನಾರಾಯಣಮೂರ್ತಿಗಳು ಸೀರೆಯನ್ನೂ ಜಾಕೆಟ್ ಬಟ್ಟೆಯನ್ನೂ ಕೃಷ್ಣಸ್ವಾಮಿಯ ಫೋಟೋವನ್ನೂ ಭಾಗ್ಯಲಕ್ಷ್ಮಿಗೆ ಕೊಟ್ಟರು. ಅವನು ಸೀರೆ ಕಳಿಸಿಕೊಟ್ಟ ಬಗ್ಗೆ ನಾರಾಯಣಮೂರ್ತಿಗಳೂ ಜಯಲಕ್ಷಮ್ಮನವರೂ ನಿಜವಾಗಿ ಸಂತೋಷಪಟ್ಟರು. ಗೌರಮ್ಮನವರು ಮಾತ್ರ, "ಕೃಷ್ಣಸ್ವಾಮಿ ಕೆಲಸಕ್ಕೆ ಸೇರಿದ ಮೇಲೆ ತಾನು ಸಂಪಾದನೆ ಮಾಡಿದ ಹಣದಿಂದ ಹೆಂಡತಿಗೆ ಒಂದು ಒಳ್ಳೆಯ ಸೀರೆ ತಂದು ಕೊಡಲಿಲ್ಲ. ನಾಣಿ ಕೈ ತುಂಬ ಹಣ ಕಳಿಸುತ್ತಾನೆ. ಈಗ ತನಗೆ ಜರಿಯ ಪಂಚೆ, ಹೆಂಡತಿಗೆ ಸಿಲ್ಕು ಸೀರೆ. ಇದಕ್ಕೇನು ಮುಟ್ಟಿಸಬೇಕು" ಎಂದು ಗೊಣಗಿದರು. "ತನ್ನ ಹೆಂಡತಿಗೆ ಒಳ್ಳೆಯ ವಸ್ತು ತಂದುಕೊಡಬೇಕು ಅನ್ನುವ ಬುದ್ಧಿಯಾದರೂ ಇದೆಯಲ್ಲ. ಮುಂದೆ ವಕೀಲನಾದರೆ ತಂದುಕೊಟ್ಟೇ ಕೊಡುತ್ತಾನೆ" ಎಂದು ಜಯಲಕ್ಷಮ್ಮ ತುಸ ಅಭಿಮಾನದಿಂದಲೇ ಹೇಳಿದರು.

ಭಾಗ್ಯಲಕ್ಷ್ಮಿಗೆ ಮಾತ್ರ ಹಿಗ್ಗೂ ಇಲ್ಲ, ಹೆಮ್ಮೆಯೂ ಇಲ್ಲ. ಸೀರೆಯನ್ನು ನೋಡಿ, ತಾನು ಬೇಡವೆಂದು ನಿರಾಕರಿಸಿದ್ದ ಸೀರೆಯೇ ಅದು ಎಂದು ಗುರುತಿಸಿದಳು. ''ನನ್ನ ಇಷ್ಟ ಬಂದವರಿಗೆ, ನಿತ್ಯ ಉಡುವವರಿಗೆ ಕೊಡುತ್ತೇನೆ'' ಎಂದು ಖಂಡಿತವಾಗಿ ಹೇಳಿದ್ದ ಗಂಡನ ನುಡಿಗಳು ಅವಳಿಗೆ ನೆನಪಾದುವು. ಹಿಂದಕ್ಕೆ ತೆಗೆದುಕೊಂಡು ಹೋಗಿದ್ದ ಸೀರೆಯನ್ನು ತನಗಾಗಿ ಚಂದ್ರಶೇಖರಯ್ಯನ ಮೂಲಕ ಕೃಷ್ಣಸ್ವಾಮಿ ಕಳಿಸಿಕೊಟ್ಟಿದ್ದಾನೆ ಎಂಬ ಮಾತಿನಲ್ಲಿ ಅವಳಿಗೆ ನಂಬಿಕೆಯುಂಟಾಗಲಿಲ್ಲ. ರುಕ್ಮಿಣಿ ಹೇಗೂ

ಅವರ ಸೋದರಮಾವನ ಮಗಳು; ಅವಳಿಗೆ ಕೊಟ್ಟಿದ್ದನ್ನು ಚಂದ್ರಶೇಖರಯ್ಯ ತೆಗೆದುಕೊಳ್ಳಲು ಒಪ್ಪದೆ, ತನಗೆ ಕಳಿಸಿರಬಹುದು ಆದರೆ, ಅವರೇ ಕಳಿಸಬಹುದಾಗಿತ್ತಲ್ಲ? ಅಲ್ಲದೆ. ಚಂದ್ರಶೇಖರಯ್ಯನ ಬಗ್ಗೆ ಕೃಷ್ಣಸ್ವಾಮಿ ಒಂದೆರಡು ಸಲ ತಾತ್ಸಾರವಾಗಿ ನುಡಿದದ್ದನ್ನು ತಾನು ಕೇಳಿದ್ದಳು. ಚಂದ್ರಶೇಖರಯ್ಯನಿಗೆ ಅವರು ಈ ಕೆಲಸ ವಹಿಸುವುದೆಂದರೇನು? ಎಲ್ಲೋ ಅವನ ಗಮನಕ್ಕೆ ಬಾರದ ರೀತಿಯಲ್ಲಿ ಅವರು ರುಕ್ಮಿಣಿಗೆ ಸೀರೆಯನ್ನು ಕೊಟ್ಟಿದ್ದು, ಅವನಿಗೆ ಅದು ಸರಿಬೀಳದೆ, ಅವರೇ ಕಳಿಸಿಕೊಟ್ಟ ಹಾಗೆ ತನಗೆ ಕಳಿಸಿಕೊಟ್ಟಿರಬೇಕು. ಅಂತೂ ಈ ಸೀರೆಯ ಪ್ರಕರಣ ಭಾಗ್ಯಲಕ್ಷ್ಮಿಗೆ ಏನೋ ಸಮಸ್ಯೆಯಾಗಿ ತೋರಿತು. ಅವಳಿಗೆ ಬಗೆ ಹರಿಯಲಿಲ್ಲ. ತನಗೆ ಹಿಂದೆಯೇ ಕೊಡಬಂದಿದ್ದ ಸೀರೆಯೆಂದೆಂಬುದನ್ನಾಗಲಿ, ತನ್ನ ಮನಸ್ಸಿನ ಸಂದೇಹಗಳನ್ನಾಗಲಿ ಭಾಗ್ಯಲಕ್ಷ್ಮಿ ತಾಯಿತಂದೆಗಳಿಗೆ ತಿಳಿಸದೆ, ಏನೋ ಅರಿಯಲಾಗದ ಅಳುಕಿನಿಂದ ಒಳಗೊಳಗೇ ವ್ಯಥೆಗೊಂಡಳು.

ನಾರಾಯಣಮೂರ್ತಿಗಳು ಸೀರೆ ತಲಪಿದ ಬಗ್ಗೆ ಚಂದ್ರಶೇಖರಯ್ಯನಿಗೆ ಉತ್ತರ ಬರೆದು ಹಾಕಿದರು; ಕೃಷ್ಣಸ್ವಾಮಿಯ ಮದರಾಸಿನ ವಿಳಾಸವನ್ನೂ ತಿಳಿಸಿದರು. ಮದರಾಸನ್ನು ಸುರಕ್ಷಿತವಾಗಿ ಸೇರಿ, ಕ್ಷೇಮದಿಂದ ಇರುವ ಬಗ್ಗೆ ಕೂಡಲೆ ಬರೆಯಬೇಕೆಂದೂ ಭಾಗ್ಯಲಕ್ಷ್ಮಿಗಾಗಿ ಚಂದ್ರಶೇಖರಯ್ಯನ ಮೂಲಕ ಕಳಿಸಿಕೊಟ್ಟ ಸೀರೆ ತಲಪಿ ಎಲ್ಲರೂ ಸಂತೋಷಪಟ್ಟರೆಂದೂ ಕೃಷ್ಣಸ್ವಾಮಿಗೂ ಅವರು ಒಂದು ಕಾಗದ ಬರೆದರು.

ಚಂದ್ರಶೇಖರಯ್ಯನೂ ಕೃಷ್ಣಸ್ವಾಮಿಗೆ ಒಂದು ಕಾಗದ ಬರೆದ: "ನೀನು ರುಕ್ಮಿಣಿಗೆಂದು ಪ್ರೀತಿಯಿಂದ ಕಳಿಸಿಕೊಟ್ಟ ಸೀರೆ ತಲಪಿತು. ಸಂತೋಷವಾಯಿತು ಪ್ರೀತಿಯ ಉಡುಗೊರೆಗೆ ಸರ್ವವಿಧದಲ್ಲೂ ಭಾಗ್ಯ ಲಕ್ಷ್ಮಿ ಪಾತ್ರಳೆಂದು ಭಾವಿಸಿ ಅದನ್ನು ಅವಳಿಗೆ, ರುಕ್ಮಿಣಿಯ ಕೋರಿಕೆಯ ಮೇರೆಗೆ, ಕಳಿಸಿಕೊಟ್ಟಿರುತ್ತೇನೆ. ನೀನೇ ನನ್ನ ಮೂಲಕ ಕಳಿಸಿಕೊಟ್ಟಿ ರುವುದಾಗಿ ನಿನ್ನ ಮಾವನವರಿಗೆ ಬರೆದಿರುತ್ತೇನೆ. ನೀನು ಬಿ. ಎಲ್. ಪರೀಕ್ಷೆಯಲ್ಲಿ ತೇರ್ಗಡೆಹೊಂದಿ, ನೀನೂ ಭಾಗ್ಯಲಕ್ಷ್ಮಿಯೂ ದೀರ್ಘಕಾಲ ಸುಖವಾಗಿ ಬಾಳಬೇಕೆಂದು ನನ್ನ ಮನಃಪೂರ್ವಕವಾದ ಹಾರೈಕೆ."

ಭಾಗ್ಯಲಕ್ಷ್ಮಿಯೂ ಧೈರ್ಯಮಾಡಿ ಒಂದು ಕಾಗದ ಬರೆದು ಹಾಕಿದಳು: "ನಾನು ಬೇಡವೆಂದ ಸೀರೆ ಮತ್ತೆ ನನ್ನ ಕೈಸೇರಿದೆ. ಈಗ ಅದನ್ನು ಬೇಡ ಎನ್ನುವುದಿಲ್ಲ. ಆದರೂ ನನ್ನ ಖಾದಿಯ ವ್ರತವನ್ನು ಮುರಿದು ಅದನ್ನು ಉಡಲಾರೆ. ನಿಮ್ಮ ತೃಪ್ತಿಗೋಸ್ಕರ ನಿಮ್ಮ ಕಣ್ಣೆದುರಿಗೆ ಒಂದು ಸಲ ಉಡುತ್ತೇನೆ. ನಮ್ಮ ತಂದೆ ನಿಮ್ಮ ಫೋಟೋವಿಗೆ ಕಟ್ಟುಹಾಕಿಸಿ ಅದನ್ನು ನನ್ನ ಕೈಗೆ ಕೊಟ್ಟರು. ಬೆಳಗಾಗ ಎದ್ದ ಕೂಡಲೆ ಅದು ಕಣ್ಣಿಗೆ ಬೀಳುವಂತೆ ಗೋಡೆಗೆ ತೂಗಹಾಕಿದ್ದೇನೆ."

ಮೂರು ಪತ್ರಗಳೂ ಎರಡೆರಡು ದಿನ ಬಿಟ್ಟು ಕೃಷ್ಣಸ್ವಾಮಿಯ ಕೈಸೇರಿದುವು. ರೋಗಿಗೆ ಹಾಲು ಪಥ್ಯವಾದರೂ ರುಚಿಯೆನಿಸುವಂತೆ, ಮೂರು ಪತ್ರಗಳ ತುಂಬೊಲವೇ ಅವನಿಗೆ ತ್ಯಾಜ್ಯವಾಯಿತು. ಪ್ರೀತಿಯ ಮಾತುಗಳು ಅವನ ಹೃದಯಕ್ಕೆ ಪೆಟ್ಟುಕೊಟ್ಟವು. ಎಲ್ಲರೂ ಕೂಡಿ ತನಗೆ ಮರ್ಯಾದೆಯಿಂದ ಅಪಮಾನ ಮಾಡುತ್ತಿರುವುದಾಗಿ ಭಾವಿಸಿಕೊಂಡನು; ರುಕ್ಮಿಣಿಯ ಬಗ್ಗೆ ತನ್ನ ವರ್ತನೆ ಚಂದ್ರಶೇಖರಯ್ಯನ ಮೂಲಕ ಎಲ್ಲರಿಗೂ ಖಂಡಿತವಾಗಿ ತಿಳಿದೇ ಇರಬೇಕೆಂದು ತರ್ಕಿಸಿದನು. ಹೇಗೂ ಎಲ್ಲರ ಪಾಲಿಗೂ ತಾನು ಕೆಟ್ಟವನಾದಹಾಗಾಯಿತು; ಇನ್ನು ಯಾರನ್ನು ಮೆಚ್ಚಿಸಿ ತನಗೆ ಏನಾಗಬೇಕು? ಇನ್ನು ತನ್ನ ದಾರಿ ತನಗೆ—ಎಂದು ತೀರ್ಮಾನಿಸಿ ಕೊಂಡನು.

ಅಪಚಾರವನ್ನೆಲ್ಲ ಸಹಿಸಿಕೊಂಡು, ನೋವನ್ನೆಲ್ಲ ನುಂಗಿಕೊಂಡು, ಮಾಡಿದ್ದನ್ನೆಲ್ಲ ಮರೆತು, ಎಲ್ಲರೂ ತೋರಿಸಿದ ತಿಳಿಯಾದ ತುಂಬೊಲವಿಗೆ ಈ ಸೋಲೆ? ಈ ತಿರಸ್ಕಾರವೇ? ಒಲವಿನಿಂದ ತಿದ್ದುವುದಕ್ಕಿಂದ ಬಯ್ದು ತಿದ್ದುವುದೇ ಮೇಲೆಂದು ಒಂದೊಂದು ಸಲ ಎನ್ನಿಸುತ್ತದೆ; ನಿಜವಾದ ಒಲವಿಗೆ ಬಗ್ಗದ ಹೃದಯವೂ ಇದೆಯಲ್ಲ ಈ ಲೋಕದಲ್ಲಿ ಎಂದು ಅಚ್ಚರಿಯಾಗುತ್ತದೆ.

ಅಂತೂ, ಕೃಷ್ಣಸ್ವಾಮಿಗೇನೋ 'ತೋರಮಾಣಿಕ ಭೂರಿ ಕೆಂಡ' ಆಯಿತು. ಭ್ರಾಂತಿ ತೊಲಗುವವರೆಗೂ ಮಾಣಿಕ ಕೆಂಡವೇ ಆಗಿ ಕಂಡೀತು; ಕೆಂಡ ಮಾಣಿಕವೇ ಆಗಿ ಮೋಹಿಸೀತು; ಕೈಸುಟ್ಟ ಮೇಲೆ ಮಾಣಿಕವನ್ನು ಮಾಣಿಕವೆಂದು ಗುರುತಿಸುವ ಕಣ್ಣು ತೆರೆದೀತು.

## ೨೦

## ಬದುಕುವ ದಾರಿ—ಕೆಡುವ ದಾರಿ

ಕೃಷ್ಣಸ್ವಾಮಿ ಯಾರ ಕಾಗದಕ್ಕೂ ಪ್ರತ್ಯುತ್ತರ ಕೊಡಲಿಲ್ಲ. ತನ್ನ ದೋಷವನ್ನು ಬಿಟ್ಟು ಇತರರ ದೋಷದಲ್ಲಿಯೇ—ಅದಿಲ್ಲದ ಕಡೆ ಅದನ್ನು ಕಾಣಹೋಗುವುದರಲ್ಲಿಯೇ—ದೃಷ್ಟಿಯುಳ್ಳ ಮನಸ್ಸು ವ್ಯಗ್ರಗೊಳ್ಳುವುದು ಸ್ವಾಭಾವಿಕ. ವ್ಯಗ್ರಗೊಂಡ ಮನಸ್ಸು ಬಹು ಬೇಗನೆ ವ್ಯಾಕುಲಗೊಳ್ಳುವುದು. ವ್ಯಾಕುಲತೆ ಶಾಂತಿಯ ಶತ್ರು. ಮನಸ್ಸು ಅಶಾಂತವಾದಾಗ ತನ್ನ ನಿತ್ಯದ ಕಾರ್ಯ ಕರ್ತವ್ಯಗಳ ನಿರ್ವಹಣೆಯಲ್ಲಿ ಜುಗುಪ್ಸೆಯೂ ಅಶ್ರದ್ಧೆಯೂ ಮೂಡುತ್ತದೆ; ಒಳಗಿಲ್ಲದ ಶಾಂತಿಯನ್ನು ಹೊರಗೆ ಹುಡುಕಲು ಮನಸ್ಸು ಹವಣಿಸುತ್ತದೆ ಪ್ರಕೃತಿ ಸೌಂದರ್ಯದಿಂದ ಆ ಶಾಂತಿಯನ್ನು ಪಡೆಯಬಹುದು; ಶ್ರೇಷ್ಠವರ್ಗದ ಕಲೆಯಿಂದ ಆ ಶಾಂತಿಯನ್ನು ಹೊಂದಬಹುದು; ಸದ್ಗ್ರಂಥ ವಾಚನದಿಂದ, ಸತ್ಸಂಗದಿಂದ, ಸತ್ಪುರುಷರ ಜೀವಿತಗಳ ಚಿಂತನೆಯಿಂದ, ಮತಧರ್ಮಗಳ ಸನಾತನ ತತ್ತ್ವಗಳ ಅನುಷ್ಠಾನದಿಂದ, ಅದನ್ನು—ಆ ಶಾಂತಿ ಸುಧೆಯನ್ನು—ಸವಿಯಬಹುದು. ಉತ್ತಮವಾದ ಈ ಬಾಹ್ಯಸಾಧನಗಳಿಂದ ಒಳಗಿಲ್ಲದ ಶಾಂತಿಯನ್ನು ಹೊರಗಣಿಂದ ತಂದು ತುಂಬಿಕೊಳ್ಳಬಹುದು. ಅದಿಲ್ಲವೋ, ತನ್ನೊಳಗೇ ತುಂಬಿ ನೆಲದೊಳಗಣ ನೀರಿನಂತೆ ಅಗೋಚರವಾಗಿರುವ ಅದನ್ನು ಎದೆತೋಡಿ ಕಂಡುಕೊಳ್ಳಬೇಕು; ಕಂಡು ಮೊಗೆಯಬೇಕು. ಇದೇ ಆತ್ಮಶೋಧನೆ: ತನ್ನ ಒಳಗನ್ನು, ತನ್ನ ನಡತೆಯನ್ನು ತಾನೇ ಆರೈದು ನೋಡಿ, ತಪ್ಪನ್ನು ಅರಿತು, ಅದಕ್ಕಾಗಿ ಮರುಗಿ ಕೊರಗಿ, ಪಶ್ಚಾತ್ತಾಪದಿಂದ ತಪ್ಪು ತೊಡೆದುಹೋಗುವಂತೆ ಆತ್ಮವನ್ನು ತೊಳೆದುಕೊಳ್ಳಬೇಕು. ಇದರಿಂದ ಬಾಳು ಉತ್ತಮವಾಗುವುದು.

ಇದಾವ ಮಾರ್ಗವನ್ನೂ ಅನುಸರಿಸಲೊಲ್ಲದ ಅಥವಾ ಅನುಸರಿಸುವ ಪ್ರವೃತ್ತಿಯಿಲ್ಲದ ಮನಸ್ಸು ಇತರ ಬಾಹ್ಯ ಸಾಧನಗಳಿಂದ ಶಾಂತಿಯನ್ನು ಪಡೆಯಲೆಳಸುತ್ತದೆ ಇವು ನಶ್ಯ, ಸಿಗರೇಟು, ಕಾಫಿಯಿಂದ ಹಿಡಿದು ವೇಶ್ಯೆಯವರೆಗೆ ಯಾವುದಾದರೂ ಆಗಬಹುದು. ಇವೆಲ್ಲ ಬೇರೆ ಬೇರೆ ಪ್ರಮಾಣದ ತೀವ್ರತೆಯುಳ್ಳ ಮಾದಕಗಳು. ಇವುಗಳಿಂದ ದೊರೆಯುವುದು

ಶಾಂತಿಯಲ್ಲ; ಶಾಂತಿಯ ಭ್ರಾಂತಿ. ಇವುಗಳಲ್ಲಿ ಕೆಲವು, ದೇಹದ ಅಂಗಗಳನ್ನು ಕೆಡಿಸಿ ಆರೋಗ್ಯವನ್ನು ಹಾಳುಮಾಡಬಹದು ; ಇನ್ನು ಕೆಲವು ದೇಹ, ಮನಸ್ಸು, ಆತ್ಮ ಮೂರನ್ನೂ ಕೆಡಿಸಿ ಮನುಷ್ಯನನ್ನು ಅಧೋಗತಿಗೆ ಕೆಡವಬಹುದು. ಬಿದ್ದವನು ಮೇಲಕ್ಕೆದ್ದರೆ ಅದು ಅವನ ಪುಣ್ಯ.

ಕೃಷ್ಣಸ್ವಾಮಿಯ ವಿಚಾರದಲ್ಲಿ ಇಷ್ಟನ್ನು ಸ್ಪಷ್ಟವಾಗಿ ಸೂಚಿಸಬಹುದು: ಅವನು ಬಿ. ಎಲ್. ಪರೀಕ್ಷೆಗೆ ಕಟ್ಟಿದ ವರ್ಷದಲ್ಲಿಯೇ ಆತ್ಮನಾಶದ ಮಾರ್ಗದಲ್ಲಿ ಕೆಲವು ಮೊದಲ ಹೆಜ್ಜೆಗಳನ್ನಿಟ್ಟನು. ಅವನು ಯಾರ ಯಾರ ದುಸ್ಸಂಗ ಮಾಡಿದನೋ, ದುಸ್ಸಂಗದ ಪರಿಣಾಮವಾಗಿ ದಿನಕ್ಕೆ ಎಷ್ಟು ಪ್ಯಾಕ್ ಸಿಗರೇಟ್ ಸುಟ್ಟನೋ, ಎಷ್ಟು ಸಲ ಹೋಟಲಿಗೂ ಸಿನಿಮಾ ನಾಟಕಗಳಿಗೂ ಭೇಟಿಕೊಟ್ಟನೋ, ಮದರಾಸಿನ ಬೀದಿ ಬೀದಿಗಳನ್ನೆಲ್ಲ ಒಂಟಿಯಾಗಿಯೋ ದುಷ್ಟ ಮಿತ್ರರೊಂದಿಗೋ ಹೊತ್ತುಗೊತ್ತಿಲ್ಲದೆ ಅಲೆದು ಹೇಗೆ ವ್ಯರ್ಥಕಾಲಕ್ಷೇಪ ಮಾಡಿದನೋ—ಈ ಸಂಗತಿಯನ್ನು ಊಹಿಸಿ ವಿವರಿಸಬಹುದೇ ಆಗಲಿ, ನಿಜವಾದ ವಿವರ ಯಾರಿಗೂ ತಿಳಿಯದು ; ಪ್ರತ್ಯಕ್ಷವಾಗಿ ಕಂಡವರಿಲ್ಲ, ಪರೋಕ್ಷವಾಗಿ ಕೇಳಿದವರಿಲ್ಲ. ಅವನ ಮುಂದಿನ ಕೆಲವು ವರ್ಷಗಳ ನಡವಳಿಕೆಯಲ್ಲಿನ ಕೆಲಕೆಲವು ಸಂಗತಿಗಳು ಅವನ ಹಿತ ಚಿಂತಕರಿಗೆ ತಿಳಿಯಬಂದವಾದ್ದರಿಂದ, ಈ ಕಾಲದಲ್ಲಿಯೇ ಒಂದೆರಡು ದುರ್ವ್ಯಸನಗಳು ಅವನ ಬೆನ್ನಂಟರಬೇಕೆಂಬುದರಲ್ಲಿ ಸಂಶಯವಿಲ್ಲ. ಬೇಸಗೆಯ ರಜದಲ್ಲಿ ಅವನು ಮೈಸೂರಿಗೆ ಬಂದ ವೇಳೆಯಲ್ಲಿ ಅವನಲ್ಲಾಗಿದ್ದ ಹೊರ ಮಾರ್ಪಾಟನ್ನು ಈ ಹಿಂದೆ ಸೂಚಿಸಿದೆಯಷ್ಟೆ; ಅನೇಕ ಸಂದರ್ಭಗಳಲ್ಲಿ ಹೊರಗಿನ ಮಾರ್ಪಾಟು ಒಳಗಿನ ಮಾರ್ಪಾಟಿನ ಮುಂಗುರುಹು. ಅವನ ನಡೆವಳಿಯಲ್ಲಿ ಅಂತಹ ಮಾರ್ಪಾಟು ಯಾವುದೂ ಆಗದೆ ಇದ್ದಿದ್ದರೆ, ಅವನು ಬಿ ಎಲ್. ಪರೀಕ್ಷೆಯಲ್ಲಿ ತೇರ್ಗಡೆಯಾಗದೆ ಇರುತ್ತಿರಲಿಲ್ಲ. ಮೊದಲ ಬಿ. ಎಲ್. ಪರೀಕ್ಷೆಯಲ್ಲಿ ತೇರ್ಗಡೆಯಾದವನು ಅಂತ್ಯ ಪರೀಕ್ಷೆಯಲ್ಲಿ ಮುಗ್ಗರಿಸಿದ. ಈ ಸಂಗತಿಕೂಡ ಕಾಲಕ್ರಮದಲ್ಲಿ ನಾರಾಯಣಮೂರ್ತಿಗಳಿಗೆ ತಿಳಿಯಿತ್ತೇ ಹೊರತು ಕೂಡಲೆ ತಿಳಿಯಲಿಲ್ಲ. ತೇರ್ಗಡೆಯಾಗಲಿಲ್ಲವೆಂದು ಅವನು ಕಾಗದ ಬರೆಯಲೇ ಇಲ್ಲ. ಕಾಗದ ಬರೆಯಲು ಹಿಂದೆಗೆದವನಿಗೆ ಮುಖ ತೋರಿಸಲು ಯಾವ ಧೈರ್ಯವಿದ್ದೀತು? ತೇರ್ಗಡೆಯಾಗದೆ

ಮದರಾಸಿನಲ್ಲಿ ಕುಳಿತವನು ಅಲ್ಲಿಯೆ ಕುಳಿತು ಕೆಟ್ಟ; ಕೆಟ್ಟವನು ಹೆಂಡತಿಯ ಕೈಬಿಟ್ಟ. ಈ ವಿಚಾರವನ್ನು ಮತ್ತೆ ಪ್ರಸ್ತಾವಿಸಬೇಕಾಗಿರುವುದರಿಂದ, ಸದ್ಯದಲ್ಲಿ ಇಷ್ಟು ಸೂಚನೆ ಸಾಕು.

## ೨೧
## ಮಡದಿ ಮಕ್ಕಳ ಮೋಹ ಸೆಳೆಯಲಿಲ್ಲ

ಈ ಮಧ್ಯೆ, ಕೃಷ್ಣಸ್ವಾಮಿ ಮೈಸೂರನ್ನು ಬಿಟ್ಟು ತೆರಳಿದ ಕೂಡಲೆ ಭಾಗ್ಯಲಕ್ಷ್ಮಿ ಗರ್ಭಿಣಿಯಾದಳು. ಅವಳ ತಾಯಿತಂದೆಗಳ ಸಂತೋಷಕ್ಕೆ ಪಾರವೇ ಇರಲಿಲ್ಲ. ಗೌರಮ್ಮನವರ ಸಡಗರವಂತೂ ಹೇಳಿ ತೀರದು; ಭಾಗ್ಯಲಕ್ಷ್ಮಿ ಏನನ್ನೂ ಬಯಸದಿದ್ದರೂ ಬಸುರಿಗೆ ಬಯಕೆ ಎಂದು ಅವರು ಬೇಕುಬೇಕಾದ ತಿನಿಸುಗಳನ್ನು ಮಾಡಿ ಅವಳಿಗೆ ಕೊಡುತ್ತಿದ್ದರು. ನಾರಾಯಣಮೂರ್ತಿಗಳು ಮಗಳಿಗೆ ಬಗೆಬಗೆಯ ಹಣ್ಣುಹಂಪಲನ್ನು ತಂದುಕೊಡುತ್ತಿದ್ದರು. ತಂದೆತಾಯಿಗಳ ಹಿಗ್ಗನ್ನು ಕಂಡು ಭಾಗ್ಯಲಕ್ಷ್ಮಿಗೂ ಹಿಗ್ಗು; ತಾನು ತಾಯಾಗುವೆನೆಂಬ ಹೆಚ್ಚಿನ ಹಿಗ್ಗು. ಆ ಹಿಗ್ಗಿನಲ್ಲಿ ಅವಳು ಓಲಾಡಿದಳು.

ಬಸುರಿಗೆ ಬಳೆತೊಡಿಸುವ ಶಾಸ್ತ್ರವೂ ವಿಜೃಂಭಣೆಯಿಂದ ನಡೆಯಿತು. ಈ ಸಂಬಂಧವಾಗಿ ಒಂದು ದಿನದ ಮಟ್ಟಿಗೆ ಬಂದು ಹೋಗಬೇಕೆಂದು ನಾರಾಯಣಮೂರ್ತಿಗಳು ಕೃಷ್ಣಸ್ವಾಮಿಗೆ ಕಾಗದ ಹಾಕಿದರು. ಅದಕ್ಕೆ ಅವನು ಉತ್ತರವನ್ನೇ ಕೊಡಲಿಲ್ಲ.

ಭಾಗ್ಯಲಕ್ಷ್ಮಿಗೆ ಗಂಡು ಮಗುವಾಯಿತು. ನಾಮಕರಣಕ್ಕೆ ಬರಬೇಕೆಂದು ಮತ್ತೆ ಕೃಷ್ಣಸ್ವಾಮಿಗೆ ಮಾವನವರಿಂದ ಪ್ರೀತಿಯ ಆಹ್ವಾನ ಹೋಯಿತು. ಈ ಕಾಗದಕ್ಕೆ, 'ಪರೀಕ್ಷೆಗೆ ಓದುತ್ತಿರುವುದರಿಂದ ಬರಲು ಸಾಧ್ಯವಿಲ್ಲ'ವೆಂದು ಕೃಷ್ಣಸ್ವಾಮಿ ಎರಡು ಪಂಕ್ತಿ ಉತ್ತರ ಬರೆದಿದ್ದ; ಇದರ ಜೊತೆಗೆ ಮೂರನೆಯ ಪಂಕ್ತಿಯೊಂದು ಇತ್ತು: ಪರೀಕ್ಷೆಗೆ ಹಣ ಕಟ್ಟುವುದಕ್ಕೂ, ಇತರ ಆವಶ್ಯಕವಾದ ಮತ್ತು ಅನಿವಾರ್ಯವಾದ ವೆಚ್ಚಗಳಿಗಾಗಿಯೂ ಐನೂರು ರೂಪಾಯಿ ಬೇಕೆಂದು. ಅಳಿಯ ಬಾರನಲ್ಲಾ

ಎಂದು ನಾರಾಯಣಮೂರ್ತಿಗಳು ಖಿನ್ನರಾದರೂ, ಮೊಮ್ಮಗನನ್ನು ಕಂಡ ಸಂತೋಷದ ಉತ್ಸಾಹದಲ್ಲಿ ಏನನ್ನೂ ಎಣಿಸದೆ, ಅಳಿಯನಿಗೆ ಅವನು ಕೇಳಿದ್ದ ಹಣವಷ್ಟನ್ನೂ ಕಳಿಸಿಕೊಟ್ಟರು.

ಕೃಷ್ಣಸ್ವಾಮಿ ಬಾರದಿದ್ದುದರಿಂದ ಎಲ್ಲರೂ ಖಿನ್ನರಾದರೂ ಯಾರೂ ಅವನ ವಿಚಾರದಲ್ಲಿ ತಪ್ಪು ಎಣಿಸಲಿಲ್ಲ. ಮಗುವಿಗೆ ನಾಮಕರಣ ಶಾಸ್ತ್ರೋಕ್ತವಾಗಿ ನಡೆಯಲು ಮಾತ್ರ ಅವಕಾಶವಾಗಲಿಲ್ಲ. ಅದು ನಡೆಯದಿದ್ದರೂ, ತೊಟ್ಟಿಲಿಕ್ಕುವ ಶಾಸ್ತ್ರ ಮೊದಲಾದುವೆಲ್ಲ ವಿಜೃಂಭಣೆಯಿಂದ ನಡೆದುವು.

ಕೃಷ್ಣಸ್ವಾಮಿಯ ತಂದೆಯ ಹೆಸರು ರಾಮಸ್ವಾಮಿ. ಆ ಹೆಸರಿನಿಂದಲೇ ಮಗುವನ್ನು ಕರೆಯಬೇಕೆಂದು ಹಿರಿಯರೆಲ್ಲರ ಇಚ್ಛೆ; ಆದರೆ, ಶ್ಯಾಮಸುಂದರ ಎಂದು ಕರೆಯಬೇಕೆಂದು ಭಾಗ್ಯಲಕ್ಷ್ಮಿಯ ಬಯಕೆ. "ಹೇಗಿದ್ದರೂ ನಾಮಕರಣವಾಗಿಲ್ಲ, ಯಾವ ಹೆಸರಿನಿಂದ ಕರೆದರೇನು?" ಎಂದು ಗೌರಮ್ಮನವರ ಸಮಾಧಾನ. ಅಂತೂ ಮಗುವಿಗೆ ಶ್ಯಾಮಸುಂದರನೆಂದೇ ಹೆಸರಾಯಿತು.

ಶ್ಯಾಮಸುಂದರನಿಗೆ ಮೂರು ತಿಂಗಳು ತುಂಬಿತು. ಅದರ ಮುಖದಲ್ಲಿ ಕಾರಣವಿಲ್ಲದ ಹುಸಿನಗೆ ಆಗಲೇ ಮೂಡಿತ್ತು. ಮಗುವಿನ ಮುದ್ದು ಮುಖವನ್ನು ನೋಡಿಕೊಂಡು ಭಾಗ್ಯಲಕ್ಷ್ಮಿ ಎಲ್ಲವನ್ನೂ ಮರೆತಿದ್ದಳು. ತೊಟ್ಟಿಲ ತುಂಬ ಮುದ್ದು ಮಗು; ಅವಳ ಎದೆ ತುಂಬ ತಾಯ್ತನದೊಲವು; ಮನೆ ತುಂಬ ಬೆಳಕು, ಉಲ್ಲಾಸ.

ಇದ್ದಕ್ಕಿದ್ದ ಹಾಗೆ ಮನೆಯ ಬೆಳಕಿನ ಮೇಲೆ ಅನಿರೀಕ್ಷಿತವಾಗಿ ಮಬ್ಬು ಕವಿಯಲಾರಂಭವಾಯಿತು. ಪರೀಕ್ಷೆ ಮುಗಿದು ತಿಂಗಳೆರಡಾದರೂ ಕೃಷ್ಣಸ್ವಾಮಿ ಬರಲೇ ಇಲ್ಲ; ನಾರಾಯಣಮೂರ್ತಿಗಳು ಬರೆದ ಎರಡು ಮೂರು ಪತ್ರಗಳಿಗೆ ಉತ್ತರವೂ ಇಲ್ಲ. ಪರೀಕ್ಷೆಯ ಫಲಿತಾಂಶ ಹೊರಬಿದ್ದ ಮೇಲೆ ಬರಬಹುದು, ಪರೀಕ್ಷೆಯಲ್ಲಿ ಏನಾಗುವುದೋ ಏನೋ ಎಂಬ ಸಂಶಯವಿರಬಹುದು, ಆದ್ದರಿಂದ ಮದರಾಸಿನಲ್ಲೇ ಉಳಿದುಕೊಂಡಿರ ಬಹುದು— ಎಂದು ಎಲ್ಲರ ತರ್ಕ, ತೀರ್ಮಾನ; ಹುಸಿನೆಚ್ಚಿಕೆ. ಎಲ್ಲರೂ ಚಾತಕ ಪಕ್ಷಿಯಂತೆ ಬೇಸಗೆ ಕಳೆಯುವುದನ್ನೇ ಕಾಯುತ್ತಿದ್ದರು. ಅವರಿವರನ್ನು

ವಿಚಾರಿಸಿದ್ದರಲ್ಲಿ, ಬಿ. ಎಲ್. ಪರೀಕ್ಷೆಯ ಫಲಿತಾಂಶ ಹೊರಬಿದ್ದಿರುವುದಾಗಿ ತಿಳಿದು ಬಂದಿತು. ಕೃಷ್ಣಸ್ವಾಮಿ ಕಾಗದ ಬರೆದಿದ್ದರಲ್ಲವೆ ಅವನ ರಿಜಿಸ್ಟರ್ ನಂಬರ್ ತಿಳಿಯುವ ಬಗೆ? ಅಳಿಯನಿಗೆ ಪರೀಕ್ಷೆಯಲ್ಲಿ ಎಲ್ಲೋ ಫೇಲಾಗಿದೆ, ಆದ್ದರಿಂದಲೇ ಕಾಗದವಿಲ್ಲ ಎಂದು ನಾರಾಯಣಮೂರ್ತಿಗಳು ತರ್ಕಿಸಿದರು. ಪರೀಕ್ಷೆಯಲ್ಲಿ ಏನಾದರೂ ಆಗಿರಲಿ, ಕೂಡಲೆ ಹೊರಟು ಬರಬೇಕೆಂದು ಕಾಗದ ಬರೆದರು. ಅದಕ್ಕೂ ಉತ್ತರವಿಲ್ಲ. ನಾರಾಯಣ ಮೂರ್ತಿಗಳಿಗೆ ಬಗೆಹರಿಯದಾಯಿತು. ಎಲ್ಲರಿಗೂ ಕಳವಳವಾಯಿತು.

ನಾರಾಯಣಮೂರ್ತಿಗಳಿಗೆ ಒಂದು ಸಮಾಧಾನ: ಅವರು ತಪ್ಪದೆ ತಿಂಗಳು ತಿಂಗಳೂ ಕಳಿಸುತ್ತಿದ್ದ ಮನಿಯಾರ್ಡರಿನ ಹಣ ಸಂದಾಯದ ರಸೀತಿ ಮಾತ್ರ ಬರುತ್ತಿದ್ದಿತು ಆದ್ದರಿಂದ, ಅವನು ಮದರಾಸಿನಲ್ಲೇ ಇದ್ದಾನೆಂದು ಒಂದು ನಂಬಿಕೆ. ಆದರೆ, 'ಯಾಕೆ ಬರಲಿಲ್ಲ?' ಎಂಬ ಸಂಶಯ, ದಿಗಿಲು.

ಗೌರಮ್ಮನವರ ಸೂಕ್ಷ್ಮಬುದ್ಧಿಗೆ ಒಂದು ಉಪಾಯ ಹೊಳೆಯಿತು: "ಬಾಣಂತಿಗೂ ಮಗುವಿಗೂ ಸಕತ್ತು ಖಾಯಿಲೆ, ಕೂಡಲೆ ಹೊರಟು ಬಾ ಅಂತ ಕೃಷ್ಣಸ್ವಾಮಿಗೆ ಒಂದು ಕಾಗದ ಹಾಕಿ ನೋಡು" ಎಂದು ತಮ್ಮನಿಗೆ ಸಲಹೆ ಕೊಟ್ಟರು. ನಾರಾಯಣಮೂರ್ತಿಗಳಿಗೆ ಈ ರೀತಿ ಸುಳ್ಳು ಬರೆಯುವುದು ಒಪ್ಪಿತವಾಗಲಿಲ್ಲ. "ನಿನ್ನಿಂದ ಕ್ಷೇಮಸಮಾಚಾರಕ್ಕೆ ಕಾಗದ ವಿಲ್ಲದೆ ಮನೆಯವರೆಲ್ಲಾ ಗಾಬರಿಗೊಂಡಿದ್ದಾರೆ. ಭಾಗ್ಯಲಕ್ಷ್ಮಿ ಕಣ್ಣೀರಿನಲ್ಲಿ ಕೈತೊಳೆಯುತ್ತಿದಾಳೆ ಕಾಗದ ಕಂಡ ಕೂಡಲೆ ಹೊರಟು ಬರುವುದು" ಎಂದು ಇಷ್ಟೇ ಕಾಗದ ಬರೆದರು.

ಮಾವನ ಕಾಗದದ ಕರೆಗೆ ಉತ್ತರ ಅಳಿಯನ ಹಣದ ತಗಾದೆ! ಯಾವ ಕಾರಣವನ್ನೂ ಕೊಡದೆ, ಕೂಡಲೆ ಇನ್ನೂರು ರೂಪಾಯಿ ಕಳಿಸಬೇಕೆಂದೂ, ನವರಾತ್ರಿಯ ಹೊತ್ತಿಗೆ ಬರುತ್ತೇನೆಂದೂ ಬರೆದಿದ್ದ. "ಹಣ ಕಳಿಸುವುದು ಬೇಡ, ನೀನೇ ಮದರಾಸಿಗೆ ಹೋಗಿ ನೋಡಿಕೊಂಡು ಬಾ. ಏನು ವಿಚಾರವೋ ಏನೋ. ಬೇಕಾದರೆ ಜೊತೆಯಲ್ಲಿ ಯಾರನ್ನಾದರೂ ಕರೆದುಕೊಂಡು ಹಣವನ್ನೂ ತೆಗೆದುಕೊಂಡು ಹೋಗಿರು" ಎಂದು ಗೌರಮ್ಮನವರು ಸಲಹೆ ಕೊಟ್ಟರು. ಉದಾರಬುದ್ಧಿಯ ನಾರಾಯಣ

ಮೂರ್ತಿಗಳಿಗೆ ಈ ಸಲಹೆ ಹಿಡಿಸಲಿಲ್ಲ. 'ಏನು ಕಷ್ಟದಲ್ಲಿದ್ದಾನೆಯೋ ಏನೋ' ಎಂದು ಹಣ ಕಳಿಸಿಕೊಟ್ಟರು; ಅಳಿಯನ ಬರವನ್ನು ತವಕದಿಂದ ನಿರೀಕ್ಷಿಸುತ್ತಿದ್ದರು.

ಈ ನಡುವೆಯಲ್ಲಿ, ನಾರಾಯಣಮೂರ್ತಿಗಳು ನನಗೊಂದು ಕಾಗದ ಬರೆದರು. ಪತ್ರ ದೀರ್ಘವಾಗಿಯೇ ಇತ್ತು. ನನಗೆ ಬರೆದ ಪತ್ರವಾದ್ದರಿಂದ ಅದರ ನಕಲನ್ನೇ ನಾನು ಇಲ್ಲಿ ಕೊಡಬಹುದು ಆದರೆ ಅದು ಅಪ್ರಕೃತ. ಅದರಲ್ಲಿ ಯಾವಯಾವುವೋ ವಿಚಾರಗಳನ್ನು ಬರೆದಿದ್ದರು. ಜೊತೆಗೆ, ಕೃಷ್ಣಸ್ವಾಮಿಯ ಬಗ್ಗೆ ತಮಗೆ ಉಂಟಾಗಿದ್ದ ಕಳವಳವನ್ನೂ ಸೂಚಿಸಿ, ಕೂಡಲೆ ಬಿಡುವು ಮಾಡಿಕೊಂಡು ಮೈಸೂರಿಗೆ ಹೊರಟುಬಂದು ತಮ್ಮನ್ನು ಕಾಣಬೇಕೆಂದು ನನ್ನನ್ನು ಪ್ರಾರ್ಥಿಸಿಕೊಂಡಿದ್ದರು. ಕೃಷ್ಣಸ್ವಾಮಿ ಮದರಾಸಿಗೆ ಹೋಗಿದ್ದ ವಿಚಾರವನ್ನು ನಾನು ಅಕಸ್ಮಾತ್ ಚಂದ್ರಶೇರಯ್ಯ ನಿಂದ ಕೇಳಿ ತಿಳಿದು ಅವನ ರಾಜೀನಾಮೆಯ ಬಗ್ಗೆ ಅಸಮಾಧಾನ ಗೊಂಡಿದ್ದರೂ ಭವಿಷ್ಯದ ಬಗ್ಗೆ ಆಶೆಯಿಟ್ಟುಕೊಂಡಿದ್ದೆ. ನಾರಾಯಣ ಮೂರ್ತಿಗಳ ಕಾಗದ ಮುಟ್ಟಿದ ಕೂಡಲೆ ನನಗೂ ತುಸ ಕಳವಳವೇ ಆಯಿತು. ಹೆಚ್ಚಿನ ವಿಚಾರ ತಿಳಿಯಬಹುದೆಂಬ ಎಣಿಕೆಯಿಂದ ಚಂದ್ರಶೇಖರಯ್ಯನ ಮನೆಗೆ ಹೋದೆ. ಚಂದ್ರಶೇಖರಯ್ಯ ತನಗೆ ಏನೂ ತಿಳಿಯದೆಂದು ಮೊದಲು ಹೇಳಿದ. ಇದ್ದಕ್ಕಿದ್ದ ಹಾಗೇ ಅದೇನೋ ದನಿ ಎಳೆದ. "ಏನಪ್ಪ ವಿಚಾರ, ನಾನು ಯಾರಿಗೂ ತಿಳಿಸುವುದಿಲ್ಲ" ಎಂದಾಗ, ಈ ಹಿಂದೆ ಪ್ರಸ್ತಾವಿಸಿರುವ ಪ್ರೇಮಪತ್ರಗಳ ವಿಚಾರ, ಸೀರೆಯ ಸಂಗತಿ— ಇವನ್ನು ವಿವರವಾಗಿ ತಿಳಿಸಿ, "ಇದನ್ನೆಲ್ಲಾ ಗುಟ್ಟಾಗಿಡಬೇಕೆಂದು ಮಾಡಿ ಕೊಂಡಿದ್ದೆ. ಆದರೆ, ಈಗ ರಟ್ಟು ಮಾಡುವುದೇ ಒಳ್ಳೆಯದೆಂದು ತೋರುತ್ತೆ" ಎಂದು ಹೇಳಿದ.

ನಾನು ಯಾವ ರಹಸ್ಯವನ್ನೂ ಬಚ್ಚಿಟ್ಟುಕೊಳ್ಳಲಾರೆ; ಅದು ನನ್ನ ಜಾಯಮಾನ. ಹಾಗೇನಾದರೂ ಮಾಡಿದರೆ ನನಗೆ ನಿದ್ದೆಯೇ ಹತ್ತುವುದಿಲ್ಲ. ನಾರಾಯಣಮೂರ್ತಿಗಳ ಬೇಡಿಕೆಗೆ ಮನ್ನಣೆ ಕೊಟ್ಟು ನಾನು ಮೈಸೂರಿಗೆ ಹೋಗಿ ಅವರನ್ನು ಕಂಡ ಕೂಡಲೆ ಏನನ್ನೂ ಮುಚ್ಚುಮರೆ ಮಾಡದೆ ಎಲ್ಲವನ್ನೂ ಅವರಿಗೆ ಒದರಿಬಿಟ್ಟೆ. ಅವರೂ ಇತರರೂ ನಾನು ಹೇಳಿದ್ದನ್ನು

ಕೇಳಿ ಜುಗುಪ್ಸೆಗೊಂಡರು, ಕೋಪಗೊಂಡರು, ಎಂದು ಬೇರೆ ಹೇಳಲೇ ಬೇಕಾಗಿಲ್ಲ. ಭಾಗ್ಯಲಕ್ಷ್ಮಿಯೊಬ್ಬಳು ಮಾತ್ರ ದುಃಖದಿಂದ ತಲೆ ತಗ್ಗಿಸಿದಳು.

ನಾರಾಯಣಮೂರ್ತಿಗಳು, ಕೃಷ್ಣಸ್ವಾಮಿ ಅನಿರೀಕ್ಷಿತವಾಗಿ ಬಂದಂದಿನಿಂದ ಆ ವರೆಗೆ ತಮ್ಮ ಗಮನಕ್ಕೆ ಬಂದಿದ್ದ ಸಂಗತಿಗಳನ್ನು ಒಕ್ಕಣಿಸಿದರು. ಬಹಳವಾಗಿ ಒತ್ತಾಯ ಮಾಡಿದ ಮೇಲೆ ಭಾಗ್ಯಲಕ್ಷ್ಮಿ ಸೀರೆಯ ಸಂಬಂಧವಾಗಿ ಎರಡು ಮಾತು ಕೂಡಿಸಿ, "ಇಷ್ಟಕ್ಕೂ ನಾನೇ ಹೊಣೆ. ನನ್ನದೇ ತಪ್ಪು" ಎಂದು ಪರಿತಪಿಸಿ ಗೋಳಾಡಿದಳು.

ಕೃಷ್ಣಸ್ವಾಮಿಯ ಸಂಬಂಧವಾಗಿ ಈ ರೀತಿ ನನಗೆ ತಿಳಿದು ಬಂದ ಸಂಗತಿಗಳನ್ನು ಈ ವರೆಗೆ ಬಣ್ಣಿಸಿದ್ದೇನೆ. ಆ ಮೇಲೆ ಹಲವು ವರ್ಷಗಳ ಅಂತರದಲ್ಲಿ ನಾನು ಕಂಡ ಕೇಳಿದ ಸಂಗತಿಗಳೇ ಮುಂದಿನ ಕಥೆ.

## ೨೨
## ನನ್ನ ಕಾರ್ಯಭಾರ

ಹೇಳಿಕೆಕೇಳಿಕೆಗಳೆಲ್ಲ ಮುಗಿದ ಮೇಲೆ, ನಾನು ನಾರಾಯಣಮೂರ್ತಿಗಳ ಮುಂದೆ ಒಬ್ಬ ಅಪರಾಧಿಯಂತೆ ಕುಳಿತಿದ್ದೆ. ಏಕೆಂದರೆ, ಭಾಗ್ಯಲಕ್ಷ್ಮಿಗೆ ಕೃಷ್ಣಸ್ವಾಮಿಯನ್ನು ಗೊತ್ತುಮಾಡಿ ಕೊಟ್ಟವನು ನಾನು ತಾನೆ. ಇಲ್ಲಿಯ ವರೆಗೂ, ಅವನು ಸರ್ವವಿಧದಲ್ಲಿಯೂ ಸಮರ್ಪಕವಾದ ನಡತೆಯುಳ್ಳವನೆಂದೇ ನಾನು ಎಣಿಸಿದ್ದೆ. ಈಗ ಇದ್ದಕ್ಕಿದ್ದ ಹಾಗೆ ಅವನ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ಮಾರ್ಪಡಿಸಬೇಕಾಗಿ ಬಂದು, ನನಗೆ ವ್ಯಥೆಯಾಯಿತು; ಅಸಮಾಧಾನವೂ ಆಯಿತು. ಮಾವನವರಿಂದ ಹಣ ಸುಲಿದು ಯಾವ ಯಾವ ರೀತಿ ದುರ್ವ್ಯಯ ಮಾಡಿ ತನಗೂ ತನ್ನನ್ನು ನಂಬಿದ ಜೀವಕ್ಕೂ ಅನ್ಯಾಯವೆಸಗುತ್ತಿರುವನೋ ಎಂದು ಶಂಕೆಯಾಯಿತು. ಇಷ್ಟಕ್ಕೆಲ್ಲಾ ನಾನೇ ಹೊಣೆಯೆಂಬಂತೆ ಕೊರಗುತ್ತ ಮೌನವಾಗಿ ಕುಳಿತ್ತಿದ್ದೆ.

"ಕೃಷ್ಣಸ್ವಾಮಿ ಮದರಾಸಿನಲ್ಲಿ ಏನಾಗಿದ್ದಾನೆಯೋ ಎಂದು ನನಗೆ ಭಯ, ರಾಮು" ಎಂದು ಪೇಚಾಡಿದರು ನಾರಾಯಣಮೂರ್ತಿಗಳು.

"ನನಗೂ ಅದೇ ಭಯ" ಎಂದೆ ನಾನು.

"ನಿನಗೆ ಯಾವುದೂ ಮುಚ್ಚುಮರೆ ಮಾಡದೆ ಎಲ್ಲವನ್ನೂ ಹೇಳಿದೇನೆ. ಅವನಿಗೆ ಯಾವ ರೀತಿಯಲ್ಲಿಯೂ ಅಸಮಾಧಾನವಾಗುವಂತೆ ನಡೆದು ಕೊಂಡಿಲ್ಲ. ಕೇಳಿ ಕೇಳಿದಾಗ ಕೇಳಿ ಕೇಳಿದಷ್ಟು ಹಣ ಕಳಿಸಿಕೊಟ್ಟಿರುತ್ತೇನೆ. ಆದರೂ ನಮ್ಮನ್ನ ಯಾಕೆ ಹೀಗೆ ತಾತ್ಸಾರ ಮಾಡಿದಾನೆಯೋ ನನಗೆ ಅರ್ಥ ವಾಗುವುದಿಲ್ಲ. ಮುಖ್ಯ ನಮ್ಮ ದುರದೃಷ್ಟ—" ಎಂದು ಕೊರಗಿ ನುಡಿದರು ನಾರಾಯಣಮೂರ್ತಿಗಳು.

"ನಮ್ಮ ದುರದೃಷ್ಟವೇನು, ಮುಖ್ಯ ಭಾಗ್ಯಲಕ್ಷ್ಮಿಯ ದುರದೃಷ್ಟ."

"ಅದು ನಿಜ ಕಣಪ್ಪ. ನೂರು ಸಲ ಆ ಮಾತು ಹೇಳು"

ಆಗ, "ಇನ್ನೂ ನಾಲ್ಕು ತಿಂಗಳು ಕೂಡ ತುಂಬಿಲ್ಲ. ಅತ್ತು ಅತ್ತು ಮೈ ಕೆಡಿಸಿಕೊಳ್ಳಬೇಡವಮ್ಮ. ರಾಮು ಬಂದಿದಾನೆ, ಮದರಾಸಿಗೆ ಹೋಗಿ ನೋಡಿಕೊಂಡು ಬಂದರೂ ಬರುತ್ತಾನೆ" ಎಂದು ಗೌರಮ್ಮನವರು ಭಾಗ್ಯ ಲಕ್ಷ್ಮಿಯನ್ನು ಸಮಾಧಾನಪಡಿಸಿ ಆಡಿದ ನುಡಿಗಳು ಬಾಣಂತಿಯ ಕೋಣೆ ಯಿಂದ ಕೇಳಿ ಬಂದುವು.

ಅದೇ ಮಾತು ಹಿಡಿದು ನಾರಾಯಣಮೂರ್ತಿಗಳು ಮುಂದುವರಿಸಿದರು:

"ನೋಡಪ್ಪ ರಾಮು, ನಿನ್ನನ್ನು ಕರಸಿಕೊಂಡದ್ದು ಅದೇ ಉದ್ದೇಶ ದಿಂದ. ಶಾಮಣ್ಣ ಊರಿನಲ್ಲಿ ಇದ್ದಿದ್ದರೆ ನಿನಗೆ ತೊಂದರೆ ಕೊಡುತ್ತಿರಲಿಲ್ಲ. ಸತ್ಯಾಗ್ರಹಕ್ಕೆ ಹೋದ ಅವನಿಗೆ ಎರಡು ವರ್ಷ ಜೈಲು ಶಿಕ್ಷೆಯಾಗಿದೆಯಂತೆ. ಕಳೆದ ತಿಂಗಳು ತಾನೆ ಅವನ ಅಂಗಡಿ ನೋಡಿಕೊಳ್ಳುವುದಕ್ಕೆ ಒಬ್ಬರನ್ನ ಗೊತ್ತುಮಾಡಿದೇನೆ. ರಾಮುಮೂರ್ತಿಯೂ ಅಂಗಡಿಯ ಮೇಲು ವಿಚಾರಣೆ ನೋಡಿಕೊಳ್ಳಬೇಕು. ಅವನಿಗೆ ಕಾಲೇಜೂ ತಪ್ಪಿ ಹೋಗುತ್ತೆ ಅಲ್ಲದೆ ಶುದ್ಧ ಹುಡುಗ. ಅವನೊಬ್ಬನನ್ನೆ ದೂರದ ಕಡೆಗೆ ಕಳಿಸಲು ಹೆದರಿಕೆ. ಈಗ ನಿನ್ನಿಂದ ಇಷ್ಟು ಉಪಕಾರವಾಗಬೇಕು: ನೀನು ಮದರಾಸಿಗೆ ಹೋಗಿ ಕೃಷ್ಣಸ್ವಾಮಿಯನ್ನು ಕಂಡು, ಸಾಧ್ಯವಾದರೆ ಜೊತೆಯಲ್ಲೆ ಕರೆದು ಕೊಂಡು ಬಂದುಬಿಡು. ಅವನ ಬಗ್ಗೆ ಏನೂ ಆತಂಕಕ್ಕೆ ಕಾರಣವಿಲ್ಲದಿದ್ದರೆ ಅವನನ್ನು ಸುಮ್ಮನೆ ನೋಡಿಕೊಂಡು ಹೊರಟು ಬಾ. ನೀನು ಬರುತ್ತೀ ಯೆಂದು ಅವನಿಗೆ ಈಗಲೇ ಬೇಕಾದರೆ ಒಂದು ಟೆಲಿಗ್ರಾಂ ಕಳಿಸುತ್ತೇನೆ."

ಎರಡು ನಿಮಿಷ ಆಲೋಚನೆಮಾಡಿ, ನಾನು ಹೋಗಲು ಒಪ್ಪಿಕೊಂಡೆ. "ಟೆಲಿಗ್ರಾಂ ಗಿಲಿಗ್ರಾಂ ಕೊಡುವ ತಂಟೆ ಬೇಡ. ನನ್ನ ಮನಸ್ಸಿನಲ್ಲಿ ಏನೇನೋ ಶಂಕೆಯಿದೆ. ಇದು ನಿಜವಾದರೆ, ಟೆಲಿಗ್ರಾಂ ಕಂಡು ಅವನು ನನ್ನ ಕೈಗೆ ಸಿಕ್ಕದೆಹೋಗಬಹುದು. ಎಲ್ಲ ನನಗೆ ಬಿಡಿ, ನಾನು ನೋಡಿ ಕೊಳ್ಳುತ್ತೇನೆ" ಎಂದೆ.

"ಅದೇನು ಶಂಕೆ?" ಎಂದು ಕೂತೂಹಲಗೊಂಡು ಕೇಳಿದರು ನಾರಾಯಣಮೂರ್ತಿಗಳು.

"ನನ್ನ ಶಂಕೆ ನಿಜವಲ್ಲದಿರಬಹುದು. ಅದನ್ನೆಲ್ಲಾ ನಿಮ್ಮ ತಲೆಗೆ ಹಚ್ಚಿಕೊಂಡರೆ ಅನಾವಶ್ಯಕವಾಗಿ ಪೇಚಾಡುವ ಹಾಗೆ ಆಗುತ್ತೆ. ಅದೆಲ್ಲಾ ನಿಮಗೆ ಯಾಕೆ? ಕೃಷ್ಣಸ್ವಾಮಿಯನ್ನು ಕರೆದುಕೊಂಡು ಬರುತ್ತೇನೆ, ಇಲ್ಲವೆ ಅವನ ವಿಚಾರವೆಲ್ಲವನ್ನೂ ಪೂರ್ತಿ ತಿಳಿದುಬಂದು ನಿಮಗೆ ಹೇಳು ತ್ತೇನೆ. ಈಗ ಇಲ್ಲದ ಸಲ್ಲದ ಊಹಾಪೋಹಮಾಡಿ ಪ್ರಯೋಜನವೇನು?" ಎಂದು ಅವರಿಗೆ ಭರವಸೆಕೊಟ್ಟೆ.

ಅವರು ಸಮಾಧಾನಗೊಂಡರು. ಎಲ್ಲರಿಗೂ ತುಸ ಸಮಾಧಾನ ವಾಯಿತು ಕೃಷ್ಣಸ್ವಾಮಿಯನ್ನು ಕರೆತರುವ ಕಾರ್ಯಭಾರ ಹೊತ್ತು ನಾನು ಮದರಾಸಿಗೆ ಪಯಣಮಾಡಿದೆ.

## ೨೩
## ಗಂಟುಬಿದ್ದ ಗರತಿ

ನಾನು ಎಂದೂ ಮದರಾಸಿಗೆ ಹೋದವನಲ್ಲ. ಬೆಳಗ್ಗೆ ಬೆಂಗಳೂರು ಬಿಟ್ಟವನು ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಮದರಾಸು ಮುಟ್ಟಿದೆ. ಕೃಷ್ಣಸ್ವಾಮಿ ಇದ್ದ ಹೋಟಲಿನ ವಿಳಾಸ ನನಗೆ ಗೊತ್ತಿತ್ತೆ ಹೊರತು, ನಗರದ ಪರಿಚಯುವಿರಲಿಲ್ಲ ಅಲ್ಲದೆ, ಹಸಿದ ಹೊಟ್ಟೆಯಲ್ಲಿ ಟ್ರಾಂ ಹತ್ತಿ, ಅದು ಗೊತ್ತಾಗಿ ನಿಲ್ಲುವ ಕಡೆ ಇಳಿದು, ಹೋಟಲನ್ನು ಹುಡುಕಿಕೊಂಡು ಹೋಗುವಷ್ಟು ಚೈತನ್ಯವೂ ನನ್ನಲ್ಲಿ ಉಳಿದಿರಲಿಲ್ಲ. ಪ್ರಯಾಣ ಕಾಲದಲ್ಲಿ ಬಾಯಿಗೆ ಬಿಡುವು ಕೊಟ್ಟು ಅವಿವೇಕದ ಕೆಲಸ ಮಾಡಿಕೊಂಡಿದ್ದೆ.

ನಾನು ಹೆಚ್ಚು ಸಾಮಾನೇನನ್ನೂ ಸಂಗಡ ತೆಗೆದುಕೊಂಡಿರಲಿಲ್ಲ. ಬಟ್ಟೆಬರೆ ಕೆಲವು, ಒಂದು ಸಣ್ಣ ದಿಂಬು, ಕೆಲವು ಪುಸ್ತಕಗಳು—ಇಷ್ಟನ್ನು ಒಂದು ಜಮಖಾನೆಯಲ್ಲಿ ಸುತ್ತಿದ್ದ ಸಣ್ಣ ಹಾಸಿಗೆ ಸುರಳಿ ಭಾರವಾಗಿರಲಿಲ್ಲ. ಇದನ್ನು ಬಗಲಿಗೆ ಸೇರಿಸಿ, ಸೆಂಟ್ರಲ್ ಸ್ಟೇಷನ್ನಿನ ಪ್ಲಾಟ್‌ಫಾರಂ ಬಿಟ್ಟು, ರಾಜಮಾರ್ಗವನ್ನು ಸೇರಿದೆ. ಮೇಲೆಬಿದ್ದು ಬಂದ ರಿಕ್ಷಾಗಳಲ್ಲಿ ಒಂದನ್ನು ಗೊತ್ತುಮಾಡಿಕೊಂಡು, ಹೋಟಲಿನ ಹೆಸರನ್ನು ರಿಕ್ಷಾ ಬಂಡಿಯುವನಿಗೆ ತಿಳಿಸಿದೆ. ಅವನು ಎರಡು ಕಾಲುಗಳಿಂದಲೇ ನಾಗಾಲೋಟ ಓಡುತ್ತ ಹದಿನೈದು ನಿಮಿಷಗಳಲ್ಲಿ ನನ್ನನ್ನು 'ಅನ್ನಪೂರ್ಣ ವಿಲಾಸ'ಕ್ಕೆ ಕರೆದೊಯ್ದ.

'ಅನ್ನಪೂರ್ಣ'ದಲ್ಲಿ ನಾನು ಮೊದಲು ಮಾಡಿದ ಕೆಲಸ 'ಉದರ ಪೂರಣ' ಅದು ಮುಗಿದ ಕೂಡಲೆ, 'ಅನ್ನಪೂರ್ಣ ಸ್ವಾಮಿ' ತಾಂಬೂಲ ವನ್ನು ಮುದ್ದು ಬಸವನ ಹಾಗೆ ಮೆಲುಕು ಹಾಕುತ್ತ ಕುಳಿತಿದ್ದ ಗಲ್ಲದ ಬಳಿಗೆ ಹೋಗಿ. ಅಲ್ಲಿಯೇ ಇದ್ದ ಒಂದು ಕುರ್ಚಿಯ ಮೇಲೆ ಕುಳಿತೆ.

ನನ್ನ ಅದೃಷ್ಟಕ್ಕೆ ಅಲ್ಲೊಬ್ಬ ಮಾಣಿ ಕನ್ನಡಿಗನಾಗಿದ್ದ. ಅವನ ಹೆಸರು ಗೋಪಾಲ (ಕೃಷ್ಣ). 'ಅನ್ನಪೂರ್ಣ ಸ್ವಾಮಿ' ಅವನನ್ನು 'ಅಡೇ ಗೋಪಾಲ' ಎಂದು ಕೂಗಿ ಕರೆದು, ನನಗೆ ಏನು ಬೇಕಾಗಿದೆಯೋ ವಿಚಾರಿಸು ವಂತೆ ತಮಿಳಿನಲ್ಲಿ ಅವನಿಗೆ ಆಜ್ಞೆಮಾಡಿದ. ಆವನು ಬರುವಾಗಲೇ ಒಂದು ಲೋಟ ನೀರನ್ನು ಹಿಡಿದು ತಂದು, ಪಕ್ಕದಲ್ಲಿದ್ದ ಮೇಜಿನ ಮೇಲಿಟ್ಟು, "ಇಡ್ಲಿಸಂಬಾರ್, ವಡೈ, ಜಾಂಗೀರ್, ಮೈಸೂರ್ ಪಾಕ್" ಎಂದು ಪ್ರವಚನ ಪ್ರಾರಂಭ ಮಾಡಿದ. "ಅವರಿಗೆ ಈಗ ತಾನೆ ಊಟವಾಗಿದೆ. ಅವರಿಗೆ ತಿಂಡಿ ಬೇಕಾಗಿಲ್ಲ. ಮೈಸೂರು ಕೃಷ್ಣಸ್ವಾಮಿಗಳನ್ನು ಹುಡುಕಿ ಕೊಂಡು ಬಂದಿದ್ದಾರೆ. ಅವರ ವಿಚಾರ ಹೇಳು" ಎಂದು ಅನ್ನಪೂರ್ಣ ಸ್ವಾಮಿ ತಮಿಳಿನಲ್ಲಿ ಅವನನ್ನು ಗದರಿಸಿ ಹೇಳಿದಂತೆ ನನಗೆ ಬೋಧೆಯಾಯಿತು.

"ಕೃಷ್ಣಸ್ವಾಮಿಗಳು ಈಗ ಮೂರು ನಾಲ್ಕು ತಿಂಗಳಿನಿಂದ ಇಲ್ಲಿ ಇಲ್ಲ ಸಾರ್" ಎಂದು ಗೋಪಾಲ ಕನ್ನಡದಲ್ಲಿ ಉತ್ತರ ಕೊಟ್ಟ. ಬೆಂಗಳೂರಿನ ಹೋಟಲಿನಲ್ಲಿ ಇದ್ದಂತೆಯೇ ನನಗೆನ್ನಿಸಿತು.

"ಊಟ ಎಲ್ಲಿ ಮಾಡುತ್ತಾರೆ ಹಾಗಾದರೆ ?"

"ಮನೆಗೇ ಊಟ ತರಿಸಿಕೊಳ್ಳುತ್ತಾರೆ."

"ಮನೆಯೇ ?"

"ಹೌದು."

"ನೀನೇ ಅವರಿಗೆ ಊಟ ತೆಗೆದುಕೊಂಡು ಹೋಗಿ ಕೊಡುತ್ತೀ ತಾನೆ?"

ಗೋಪಾಲ ಉತ್ತರ ಹೇಳಲು ಸ್ವಲ್ಪ ಅನುಮಾನಿಸಿದ.

"ಅನುಮಾನ ಯಾಕೆ ?"

"ಮುಚ್ಚುಮರೆ ಏನು ಸ್ವಾಮಿ. ಮೈಸೂರಿನವರು ಯಾರಾದರೂ ಬಂದು ನನ್ನ ವಿಚಾರ ಕೇಳಿದರೆ 'ನಮಗೆ ಗೊತ್ತಿಲ್ಲ' ಅಂತ ಹೇಳಿಬಿಡಿ ಅಂತ ಕೃಷ್ಣಸ್ವಾಮಿಗಳು ನನಗೂ ರಾಮಯ್ಯರಿಗೂ ಖಂಡಿತವಾಗಿ ತಿಳಿಸಿಬಿಟ್ಟಿದಾರೆ."

ಕೃಷ್ಣಸ್ವಾಮಿ ಈಗಾಗಲೇ ಬಹಳ ಎಚ್ಚರಿಕೆ ತೆಗೆದುಕೊಂಡಿದ್ದಾನೆಂದು ನನಗೆ ಸ್ಪಷ್ಟವಾಯಿತು. ವಂಚಕರ ಮಾರ್ಗವೆಲ್ಲ ಹೀಗೆ ತಾನೆ ?

ನಾನೂ ಸ್ವಲ್ಪ ಎಚ್ಚರಿಕೆ ವಹಿಸಿದೆ.

ನಾನು ಮದರಾಸನ್ನು ನೋಡಲು ಬಂದಿರುವೆನೆಂದೂ ಕೃಷ್ಣ ಸ್ವಾಮಿಯ ಜೊತೆ ಸಿಕ್ಕದಿರುವುದರಿಂದ ಜೊತೆಗೆ ಬರಬೇಕೆಂದೂ ಗೋಪಾಲನನ್ನು ಕರೆದೆ. ಅವನು ತನ್ನ ದಣಿ ಬಿಟ್ಟುಕೊಟ್ಟರೆ ಆಗಬಹುದೆಂದು ಉತ್ತರ ಕೊಟ್ಟ. ರಾಮಯ್ಯರಿಗೆ ಐದು ರೂಪಾಯಿ ಶುಲ್ಕ ಸಲ್ಲಿಸಿ, ಆತ ಗೊಣಗಾಡಿ ಬಿಟ್ಟುಕೊಟ್ಟ ಗೋಪಾಲನ ಮೇಲೆ ಒಪ್ಪೊತ್ತಿನ ಒಡೆತನವನ್ನು ಪಡೆದುಕೊಂಡೆ. ನಾನೂ ಅವನೂ ಇಬ್ಬರೂ ಹೋಟಲನ್ನು ಬಿಟ್ಟು ತೆರಳಿದೆವು.

"ನಾನು ಸಮುದ್ರ ನೋಡಿಲ್ಲ. ಬೀಚಿಗೆ (ಸಮುದ್ರ ತೀರಕ್ಕೆ) ಕರೆದುಕೊಂಡು ಹೋಗು" ಎಂದೆ.

"ಯಾಕೆ ? ಸಿನಿಮಾಕ್ಕೆ ಹೋಗೋಣ. ದಾರಿಯಲ್ಲಿ ಚೈನಾಬಜಾರ್ ನೋಡಬಹುದು. ಸಮುದ್ರದಲ್ಲೇನಿದೆ ?"

"ನಾನು ಎರಡು ದಿನದ ಮಟ್ಟಿಗೆ ಬಂದಿದೇನೆ. ಮದರಾಸಿಗೆ ಬಂದು ಸಮುದ್ರ ನೋಡದೆ ಹೋಗುವುದುಂಟೆ ? ಸಮುದ್ರ ತೀರದಲ್ಲಿ ಒಂದು

ಅರ್ಧ ಗಂಟೆ ಕಳೆದು, ಆಮೇಲೆ ಬೇಕಾದರೆ ಸಿನಿಮಾಕ್ಕೆ ಹೋಗೋಣ" ಎಂದೆ ನಾನು.

ಗೋಪಾಲ ನನ್ನನ್ನು ಹೈಕೋರ್ಟಿನ ಬೀಚಿಗೆ ಕರೆದುಕೊಂಡು ಹೋದ. ಆಗ ಸುಮಾರು ಐದು ಗಂಟೆಯ ಸಮಯ. ಕಡಲ ಕರೆಗೆ ವಿಹಾರಾರ್ಥವಾಗಿ ಆಗಲೇ ಜನ ಬಂದು ನೆರೆಯುತ್ತಿದ್ದರು. ನಾನೂ ಗೋಪಾಲನೂ ನುಣ್ಣನೆಯ ಮರಳಮೇಲೆ ಕುಳಿತೆವು. ಕಡಲ ಮೊದಲ ನೋಟ ನನ್ನ ಕಣ್ಮನಗಳನ್ನು ಸೆಳೆಯುತ್ತಿದ್ದರೂ, ಗೋಪಾಲನ ಮನಸ್ಸಿನಿಂದ ಕೃಷ್ಣಸ್ವಾಮಿಯ ವಿಚಾರವನ್ನು ಹೇಗೆ ಹೊರಸೆಳೆಯುವುದೆಂಬ ಸನ್ನಾಹದಲ್ಲಿ ನನ್ನ ಮನಸ್ಸು ಮಗ್ನವಾಗಿತ್ತು. ಪ್ರಕೃತಿ ಸೌಂದರ್ಯವನ್ನು ಸವಿಯುವ ಸ್ಥಿತಿಯಲ್ಲಿರಲಿಲ್ಲ. ಕಡೆಗೆ–" ನನಗೆ ಸಿನಿಮಾ ಗಿನಿಮಾ ಬೇಕಿಲ್ಲ. ನಾನು ಹೋದಮೇಲೆ ನೀನು ಹತ್ತು ಸಿನಿಮಾ ನೋಡು" ಎಂದು ಹತ್ತು ರೂಪಾಯಿನ ನೋಟನ್ನು ಅವನ ಕೈಗಿತ್ತೆ. ಅವನ ಮುಖ ಅರಳಿತು.

"ಹಾಗಾದರೆ ಏನು ಮಾಡಬೇಕು, ಅಪ್ಪಣೆಯಾಗಲಿ."

ನಾನು ಗಾಳ ಎಸೆದೆ:

"ಈ ರಾತ್ರಿ ನಾನು ಸ್ವಲ್ಪ ಸುಖವಾಗಿ ಕಾಲ ಕಳೆಯಬೇಕು ಅಂತ ಮಾಡಿಕೊಂಡಿದೇನೆ. ನಾನು ಹೇಳಿದ್ದು ನಿನಗೆ ಅರ್ಥವಾಯಿತೋ? ಕೃಷ್ಣಸ್ವಾಮಿ ಈ ಊರಿಗೆ ಹಳಬ, ನನಗೆ ಅವನಿಂದ ಏನಾದರೂ ಸಹಾಯವಾದೀತೇನೋ ಅಂತ ಇದ್ದೆ. ಅವನ ಬಳಿಗಂತೂ ನೀನು ನನ್ನನ್ನು ಕರೆದೊಯ್ಯುವಹಾಗಿಲ್ಲ. ನಿನಗೆ ಬೇರೆ ಯಾವುದಾದರೂ ಮನೆ ಗೊತ್ತಿದೆಯೇ?"

"ಅದಕ್ಕೇನು ಸ್ವಾಮಿ, ಮಿಂಟ್ ಸ್ಟ್ರೀಟಿನಲ್ಲಿ ಬೇಕಾದಷ್ಟು ಮನೆಗಳುಂಟು. ಅದಕ್ಕೆ ಯಾರ ಸಹಾಯವೂ ಬೇಕಿಲ್ಲ. ರಿಕ್ಷಾದವರಿಗೆ ಹೇಳಿಬಿಟ್ಟರೆ ಸಾಕು, ಅವರು ಎಲ್ಲಿಗೆ ಬೇಕಾದರೂ ಕರೆದೊಯ್ದು, ಕಾದಿದ್ದು, ನಿಮ್ಮನ್ನು ಹಿಂದಕ್ಕೆ ತಂದು ಬಿಡುತ್ತಾರೆ."

"ರಿಕ್ಷಾದವರ ಸಹವಾಸ ಬೇಡವಪ್ಪ. ಅವರ ವಿಚಾರ ಕೇಳಿ ಬಲ್ಲೆ. ಅವರು ಎಲ್ಲಿಗೋ ಕರೆದುಕೊಂಡು ಹೋಗಿ ಏನೋ ಆಗಿಬಿಟ್ಟರೆ ಏನು ಮಾಡುವುದು ಆಮೇಲೆ? ನನಗೂ ಹೆಂಡತಿ ಮಕ್ಕಳು ಇದ್ದಾರೆ."

"ನೀವು ಹೇಳುವುದು ಸರಿ, ಅನ್ನಿ. ಕೃಷ್ಣಪ್ಪನವರು ಮೊದಲು ರಿಕ್ಷಾದವರನ್ನು ನಂಬಿಯೇ ಯಾರ ಯಾರ ಬಳಿಗೋ ಹೋಗಿ ಮೈಯೆಲ್ಲ ಕೆಡಿಸಿಕೊಂಡರು. ಅದನ್ನು ನಾನು ಪತ್ತೆ ಹಚ್ಚಿದೆ. ಇಂಥ ರೋಗಗಳನ್ನು ವಾಸಿ ಮಾಡುವುದರಲ್ಲಿ ನಮ್ಮ ಮಂಗಳೂರಿನ ರಾಮಕೃಷ್ಣಪಾಯ್ ಡಾಕ್ಟರು ಒಳ್ಳೆ ಗಟ್ಟಿಗರು. ಕೃಷ್ಣಪ್ಪನವರನ್ನು ನಾನೇ ಅವರ ಬಳಿಗೆ ಕರೆದುಕೊಂಡು ಹೋಗಿ ಗುಣ ಮಾಡಿಸಿದೆ ಅಂದರೆ, ಐನೂರು ರೂಪಾಯಿ ಮೇಲೆ ದೌಡಾಯಿಸಿತು. ನನಗೂ ಐವತ್ತು ಇನಾಮು ಕೊಟ್ಟರು. ನೀವು ಏನೇ ಅನ್ನಿ ಸ್ವಾಮಿ, ಒಳ್ಳೆ ಧಾರಾಳಿಗಳು ಕೃಷ್ಣಪ್ಪನವರು"

ಪರವಾಯಿಲ್ಲ, ನನ್ನ ಗಾಳಕ್ಕೆ ಮೀನು ಸಿಕ್ಕಿತು ಎಂದು ಹಿಗ್ಗಿದೆ.

"ನಾನು ಕಂಡಹಾಗೆ ಕೃಷ್ಣಪ್ಪನವರು ತೀರ ಸಾಮಾನ್ಯ, ಬಡವರು" ಎಂದೆ ನಾನು.

"ಅವರ ತಂದೆಯಿಂದ ತಿಂಗಳು ತಿಂಗಳೂ ನೂರು ನೂರೈವತ್ತು ಮನಿಯಾರ್ಡರು ಬರುತ್ತೆ? ನಮ್ಮ ಹೋಟಲ ಅಡ್ರೆಸ್ಸಿಗೇ ಬರುತ್ತಲ್ಲ. ಈಗ ಒಂದು ವರ್ಷದಿಂದ ಬ್ಯಾಂಕಿನಲ್ಲಿ ಬೇರೆ ಕೆಲಸ ಮಾಡುತ್ತಾರೆ ಅಲ್ಲಿ ನೂರೈವತ್ತು ಸಂಬಳ. ಮಜಾ ಮಾಡುವುದಕ್ಕೆ ತಿಂಗಳಿಗೆ ಮುನ್ನೂರು ಸಾಲದೆ?"

"ಬಿ. ಎಲ್. ಮಾಡಿ ಇಲ್ಲೇ ಅಡ್ವೋಕೇಟರಾಗಿದಾರೆ ಅಂದು ಕೊಂಡಿದ್ದೆ."

"ಸರಿ. ಅವರು ಪರೀಕ್ಷೆಗೇ ಕಟ್ಟಲಿಲ್ಲ. ಆಗ ತಾನೆ ಅವರಿಗೆ ಸಕತ್ತು ಖಾಯಿಲೆ ಆಗಿದ್ದು? ನಾನಿಲ್ಲದೆ ಇದ್ದಿದ್ದರೆ ಆಸ್ಪತ್ರೆಗೆ ದಾಖಲಾಗ ಬೇಕಾಗಿತ್ತು. ಅದಕ್ಕೇ ನನ್ನ ಕಂಡರೆ ಅವರಿಗೆ ಪ್ರಾಣ, ಸ್ವಾಮಿ" ಎಂದು ಹಿಗ್ಗಿನಿಂದ ತೊಡೆ ಕುಣಿಸುತ್ತ ಹೇಳಿದ ಗೋಪಾಲ.

ಕೃಷ್ಣಸ್ವಾಮಿಯ ಪೂರ್ವ ವೃತ್ತಾಂತ ನನಗೆ ಸ್ವಲ್ಪ ಗೊತ್ತಿಲ್ಲದಿದ್ದರೆ, ಗೋಪಾಲನ ಮಾತುಗಳನ್ನು ನಂಬುವಂತೆಯೇ ಇರಲಿಲ್ಲ. ಕೃಷ್ಣಸ್ವಾಮಿ ಹೇಗಿದ್ದವನು ಹೇಗಾದ ಎಂದು ನನಗೆ ಅತ್ಯಂತ ಆಶ್ಚರ್ಯವಾಯಿತು.

"ಕೆಟ್ಟ ಮೇಲೆ ಬುದ್ಧಿ ಬಂತು ಅಂತ ಈಗ ಕೃಷ್ಣಸ್ವಾಮಿ ಎಲ್ಲಾ ಬಿಟ್ಟುಬಿಟ್ಟದಾರೆ ಅಂತ ಕಾಣುತ್ತೆ, ಅಲ್ಲವೆ?"

"ನಿಮಗೆ ಭ್ರಾಂತಿ ಸ್ವಾಮಿ, ಭ್ರಾಂತಿ. ಇದನ್ನೆಲ್ಲ ಕಲಿತ ಮೇಲೆ ಬಿಡುವುದಕ್ಕಾಗುತ್ತಯೇ ಸ್ವಾಮಿ? ಕೇಳಿಲ್ಲವೇ, ಅಂಟಿದ ರೋಗ ಗಂಟು ಬಿದ್ದ ಗರತಿ ಅಂತ"

"ಹಾಗಾದರೆ ಈಗಲೂ ಅವರಿವರ ಮನೆಗೆ ಹೋಗುತ್ತಾನೆಯೇ?"

"ಅವರಿವರ ಮನೆಗೆ ಹೋಗಬೇಕಾದ ಪ್ರಸಂಗವೇ ಇಲ್ಲ."

"ಅಂದರೆ?"

"ಅವರು ಈಗ ಭೇಷಾಗಿ ಸಂಸಾರ ಮಾಡುತಾ ಇದಾರೆ."

"ಸೂಳೆಯೊಂದಿಗೆ ಸಂಸಾರವೇ?"

"ನೋಡಿ, ಆ ಮಾತು ಮಾತ್ರ ಹೇಳಬೇಡಿ. ಅವಳನ್ನ ಪಡೆಯುವುದಕ್ಕೆ ಯಾರಾದರೂ ಪುಣ್ಯ ಮಾಡಿರಬೇಕು. ನಮ್ಮೂರಿನ ಹುಡುಗಿ ಅಂತಲೆ ಇಟ್ಕೊಳ್ಳಿ. ಚೆಲುವೆ ಅಂದರೆ ಅಂಥ ಚೆಲುವೆ. ತಕ್ಕಮಟ್ಟಿಗೆ ಇಂಗ್ಲಿಷು ಬರುತ್ತೆ ಸಂಗೀತವೂ ಬರುತ್ತೆ. ಮದುವೆಯಾಗಿತ್ತು. ಗಂಡ ತೊರೆದು ಹೋಗಿದ್ದ. ಯಾರೂ ದಿಕ್ಕಿರಲಿಲ್ಲ. ಇನ್ನೇನು ಮಾಡುತಾಳೆ, ಪಾಪ. ಮದರಾಸಿನಲ್ಲಿ ಸುಲಭವಾಗಿ ಜೀವನ ನಡೆಯುತ್ತೆ ಅಂತ ಇಲ್ಲಿಗೆ ಬಂದಳು. ಒಬ್ಬನನ್ನ ನಂಬಿದ ಮೇಲೆ ಅವರಾಗಿ ಕೈಬಿಡುವವರೆಗೆ ಬಿಟ್ಟು ಹೋಗತಕ್ಕವಳಲ್ಲ. ಆದರೂ, ಈ ದಾರಿಗೆ ಬಂದಮೇಲೆ, ಸುಲಭ ಜೀವನ ಅವಳಿಗೂ ಬೇಸರವಾಗಿತ್ತು. ಅವಳ ಬವಣೆ ಕಂಡು, ನನಗೆ ಕೃಷ್ಣಸ್ವಾಮಿಗಳ ಅಂದರೆ ಸಾವಿರ ಜನ. ಪರಿಚಯ ಆದಮೇಲೆ, ಅವಳನ್ನು ಅವರಿಗೆ ಗುರುತು ಮಾಡಿಕೊಟ್ಟೆ. ಅವಳೂ ಬದುಕಿಗೊಂಡಳು, ಅವರೂ ಬದುಕಿಕೊಂಡರು."

"ಆಕೆಯ ಹೆಸರೇನು?"

"ಆಕೆ ನಿಮಗೆ ದಕ್ಕುವುದಿಲ್ಲ. ಹೆಸರು ಕಟ್ಕೊಂಡೇನು?"

"ಸುಮ್ಮನೆ ಕೇಳಿದೆ, ಅಷ್ಟೆ."

"ಉಮಾಬಾಯಿ."

ನಾನು ಸ್ವಲ್ಪ ಹೊತ್ತು ಮೌನವಾಗಿದ್ದೆ.

"ಹಾಗಾದರೆ ಸಿನಿಮಾಕ್ಕೆ ಹೋಗುವುದು ಬೇಡವೇನು? ಹೋಗುವುದಿದ್ದರೆ, ಏಳಬೇಕು. ಹೊತ್ತಾಯಿತು."

"ಗೋಪಾಲ್, ನೀನು ನನಗೊಂದು ಉಪಕಾರ ಮಾಡಬೇಕು."

" ಏನು ?"

" ನೀನು ನನ್ನನ್ನ ಕೃಷ್ಣಸ್ವಾಮಿಯ ಮನೆಗೆ ಕರೆದುಕೊಂಡು ಹೋಗಲೇ ಬೇಕು."

" ಯಾಕೆ, ಸ್ವಾಮಿ? ನಾನು ಮೊದಲೇ..........."

" ಇಲ್ಲ. ಖಂಡಿತ ನಾನು ಅವನನ್ನು ನೋಡಲೇಬೇಕು. ನಿನ್ನಲ್ಲಿ ಮುಚ್ಚುಮರೆಯೇನು, ಅವನನ್ನ ಕಾಣದೆ ನಾನು ಹಿಂತಿರುಗಿ ಹೋಗುವ ಹಾಗಿಲ್ಲ. ನೀನು ಉಪಕಾರ ಮಾಡದೆ ಹೋದರೆ ನಾನು ನಿರಾಶನಾಗಬೇಕಾಗುತ್ತೆ." ಎಂದು ಇನ್ನು ಹತ್ತು ರೂಪಾಯಿನ ನೋಟು ತೆಗೆದು ಅವನ ಮುಂದಿಟ್ಟೆ.

ಗೋಪಾಲ ಕೆಲ ಹೊತ್ತು ಕಡಲ ಕಡೆ ದಿಟ್ಟಿಸುತ್ತ ಕುಳಿತ. ಕಡೆಗೆ ಹೇಳಿದ:

" ಹಾಗಾದರೆ ಒಂದು ಉಪಾಯ ಹೇಳುತ್ತೇನೆ."

" ಏನು ?"

" ಅವರ ಮನೆಗೆ ಕರೆದುಕೊಂಡು ಹೋಗಲಾರೆ. ಅವರಿಗೆ ಕೊಟ್ಟ ಮಾತನ್ನು ಮುರಿಯಲಾರೆ. ಅವರು ತಪ್ಪದೆ ಪ್ರತಿನಿತ್ಯ ಸಂಜೆ ಈ ಬೀಚಿಗೆ ಬರುತ್ತಾರೆ. ನೀವು ಇಲ್ಲೇ ಇದ್ದರೆ ಅವರನ್ನು ಈಗಲೇ ಕಂಡರೂ ಕಾಣಬಹುದು. ನಾನು ಹೊರಟು ಹೋಗುತ್ತೇನೆ. ಅವರು ಸಿಕ್ಕದೆ ಹೋದರೆ, ನಾವು ಬಂದ ಟ್ರಾಮಿನಲ್ಲೇ ಹೋಟಲಿಗೆ ಹಿಂತಿರುಗಿ ಬನ್ನಿ. ನಾಳೆ ನೋಡೋಣ."

ಗೋಪಾಲ ಹೊರಟ. ನಾನು ಕಾದು ಕುಳಿತೆ. ಬಹುಶಃ ಅರ್ಧ ಗಂಟೆ ಹೀಗೆ ಕಾದಿರಬಹುದು. ಮಬ್ಬಾಗುತ್ತ ಬರುತ್ತಿತ್ತು. ಅವರು (ಕೃಷ್ಣಸ್ವಾಮಿ ಮತ್ತು ಉಮಾಬಾಯಿ) ಇತ್ತ ಸುಳಿಯುತ್ತಾರೆಯೋ ಇಲ್ಲವೋ ಎಂಬ ಸಂದೇಹದಿಂದ ಕರೆಯುದ್ದಕ್ಕೂ ನಡೆದಾಡತೊಡಗಿದೆ.

ಕತ್ತಲೆ ಕಾಲಿಕ್ಕತೊಡಗಿತು. ಕೃಷ್ಣಸ್ವಾಮಿ ಕಾಣಲಿಲ್ಲ. ನಿರಾಶನಾಗಿ ಹೋಟಲಿಗೆ ಹಿಂತಿರುಗಿದೆ.

" ಸಿಕ್ಕಲಿಲ್ಲವೆ ?" ಎಂದ ಗೋಪಾಲ.

" ಇಲ್ಲ" ಎಂದೆ.

"ಇಲ್ಲೆ ತಾನೆ ಮಲಗುವುದು? ನಾಳೆ ನೋಡೋಣ" ಎಂದು ಗೋಪಾಲ ಒಳಕ್ಕೆ ಹೊರಟ. ಅವನ 'ನೋಡೋಣ'ದಲ್ಲಿ ನನಗೆ ನಂಬಿಕೆಯುಂಟಾಗಲಿಲ್ಲ.

ನಾನು ತಲೆ ತಗ್ಗಿಸಿ ಆಲೋಚನಾಮಗ್ನನಾಗಿ ಕುಳಿತಿದ್ದೆ. ಇದ್ದಕ್ಕಿದ್ದ ಹಾಗೇ ನನ್ನ ಮಂದಬುದ್ಧಿಗೂ ಏನೋ ಹೊಳೆಯಿತು. ಬೇಗನೆ ಊಟಕ್ಕೆದ್ದೆ. ನಾನು ಊಟ ಮಾಡುತ್ತಿರುವಾಗಲೇ ಹೋಟಲಿನ ಕೆಲಸದ ಆಳೊಬ್ಬ ಒಂದು ದೊಡ್ಡ ಟಿಫಿನ್ ಕ್ಯಾರಿಯರ್ ಹಿಡಿದು ಹೊರಟದ್ದು ಕಂಡುಬಂದಿತು. ಅವನು ಹೊರಗಡೆ, "ಯಾರ ಮನೆಗೆ, ಕೃಷ್ಣಸ್ವಾಮಿಗಳ ಮನೆಗೋ ಕೃಷ್ಣಯ್ಯರ್ರ ರೂಮಿಗೋ" ಎಂದು ರಾಮಯ್ಯರನ್ನು ಕೇಳಿದ್ದು ನನ್ನ ಕಿವಿಗೆ ಬಿತ್ತು. "ಕೃಷ್ಣಸ್ವಾಮಿಗಳ ಮನೆಗೆ" ಎಂದು ಅಯ್ಯರ್ ಗದರಿಸಿ ಹೇಳಿದ್ದೂ ನಗಾರಿ ಹೊಡೆದ ಹಾಗೆ ಕಿವಿಗೆ ಬಿತ್ತು. ನಾನು ಉತ್ತರಾ ಪೋಶನವನ್ನೂ ತೆಗೆದುಕೊಳ್ಳದೆ ಸರ್ರನೆ ಎದ್ದು, ಗೋಪಾಲನಿಗೆ ಕಾಣದಂತೆ ಆಳನ್ನು ಹಿಂಬಾಲಿಸಿದೆ.

ಈ ಪ್ರಕರಣವನ್ನು ಹೆಚ್ಚು ಬೆಳಸಿ ಪ್ರಯೋಜನವಿಲ್ಲ. ಕೃಷ್ಣಸ್ವಾಮಿಯನ್ನು ಕಂಡು ಮಾತಾಡಿದ್ದಾಯಿತು. ಉಮಾಬಾಯಿಯನ್ನೂ ಕಣ್ಣಾರೆ ಕಂಡು, ಅವಳ ಚೆಲುವನ್ನು ನೋಡಿ ಅಚ್ಚರಿಗೊಂಡೆ. ಆ ರೂಪಜ್ವಾಲೆಯನ್ನು ಬಿಟ್ಟು ಈ ಪತಂಗ ಹೇಗೆ ಹೊರಬಂದೀತು ಎಂದು ಮೊದಲೇ ಸಂದೇಹವಾಗಿತ್ತು. ಕೃಷ್ಣಸ್ವಾಮಿಯ ನುಡಿಗಳಿಂದ ನನ್ನ ಸಂದೇಹ ನಿಜವಾಯಿತು. "ಭಾಗ್ಯಲಕ್ಷ್ಮಿಯೇ ಬಂದು ಕಾಲಿಗೆ ಬಿದ್ದು ಬೇಡಿಕೊಂಡರೂ ನಾನು ಬರುವುದಿಲ್ಲ" ಎಂದು ಖಂಡಿತವಾಗಿ ಹೇಳಿಬಿಟ್ಟನು. ನಾನು ತಡೆಯಲಾರದೆ, "ನಿನಗೆ ಯಾಕೆ ಈ ದುರ್ಬುದ್ಧಿ ಬಂತು?" ಎಂದು ಝಂಕಿಸಿದೆ. "ಇದು ನಮ್ಮ ಮಾವ ಕಲಿಸಿದ ಬುದ್ಧಿಯೇ. ಕೆಟ್ಟದಾರಿ ಹಿಡಿಯಲಿ ಎಂದರು. ಹಾಗೆಯೆ ಮಾಡಿದೇನೆ" ಎಂದು ಸಿಡಿದು ನುಡಿದ. ಇದೇನೋ ಹೊಸ ಸಂಗತಿ ಎಂದು ಆಶ್ಚರ್ಯಗೊಂಡು, "ಏನು ಸಮಾಚಾರ. ಅವರ ತಪ್ಪಿದ್ದರೆ ಅವರಿಗೆ ಬುದ್ಧಿ ಹೇಳುತ್ತೇನೆ. ಸ್ವಲ್ಪ ಹೇಳಬಾರದೆ" ಎಂದು ಅನುನಯದಿಂದ ಕೇಳಿಕೊಂಡೆ. ಈ ಹಿಂದೆಯೇ

ಪ್ರಸ್ತಾವಿಸಿರುವ ಸಂಗತಿಯನ್ನು ಅವನು ಸ್ವಲ್ಪ ಬಣ್ಣಕೊಟ್ಟು ಬಿತ್ತರಿಸಿದ. ಮತ್ತೆ ಯಾರಾದರೂ ಬಂದು ತನ್ನನ್ನು ಕರೆಯುವ ಪ್ರಯತ್ನ ಮಾಡಿದರೆ ಪ್ರಾಣ ಕಳೆದುಕೊಳ್ಳುವುದಾಗಿ ಬೆದರಿಸಿದ. ಇಂಥವರು ಏನನ್ನಾದರೂ ಮಾಡಿಯಾರು ಎಂದು ನಾನೂ ಸುಮ್ಮನಾದೆ. ಅವನ ಕಟ್ಟಕಡೆಯ ನಿರ್ಧಾರದ ಉತ್ತರವನ್ನು ಪಡೆದು, ಅಲ್ಲಿ ಹೆಚ್ಚು ಹೊತ್ತು ನಿಲ್ಲುವ ಮನಸ್ಸಾಗದೆ, ನಿರಾಶನಾಗಿ ಹಿಂದಿರುಗಿದೆ.

ಮಾರನೆಯ ದಿನವೇ ಬೆಂಗಳೂರಿನ ರೈಲು ಹಿಡಿದು, ' ಹೋದ ಪುಟ್ಟ ಬಂದ ಪುಟ್ಟ' ಎಂದು ಮರಳಿದೆ.

## ೨೪
## ಕೋಪದ ಕವಚ ತೊಟ್ಟ ದುಃಖ

ನನ್ನ ಸಂಧಾನ ನಿಷ್ಫಲವಾದುದನ್ನು ಕೇಳಿ ನಾರಾಯಣಮೂರ್ತಿಗಳು ನಿರಾಶರಾದರು ನಾನು ಕಂಡು ಕೇಳಿದ್ದನ್ನೆಲ್ಲ ಮರೆಮಾಚದೆ, ಉತ್ಪ್ರೇಕ್ಷೆ ಮಾಡದೆ, ವರದಿಮಾಡಿದೆ. ನಾನು ಹೇಳಿದ್ದನ್ನು ಕೇಳಿ ಎಲ್ಲರೂ ಕಣ್ಣೀರು ಹಾಕಿದರು. ನಾನು ಈ ಸಂಗತಿಯನ್ನು ಕಥಿಸುತ್ತಿದ್ದಾಗ ಭಾಗ್ಯಲಕ್ಷ್ಮಿ ತೊಡೆಯಮೇಲೆ ಶ್ಯಾಮಸುಂದರನನ್ನು ಮಲಗಿಸಿಕೊಂಡು ನಿಶ್ಚಲ ಗಂಭೀರತೆ ಯಿಂದ ಕುಳಿತಿದ್ದಳು ಅವಳ ಗಂಭೀರ ಮುಖ ಮುದ್ರೆಯ ಹಿಂದೆ ಯಾವ ಯಾವ ಭಾವ ಮಡುಗಟ್ಟಿತ್ತೋ ನಾನರಿಯೆ. ಕಣ್ಣೀರು ತೊಟ್ಟಿಕ್ಕದಿದ್ದರೂ ಅದು ಕಣ್ಣಲ್ಲಿ ತುಂಬಿದ್ದುದು ಕಾಣಬರುತ್ತಿತ್ತು. ನೊಂದ ಮಡದಿಯ ಕಂಬನಿ ನೆಲಕ್ಕೆ ಬೀಳಬಾರದೆಂದೋ ಏನೋ ಅವಳು ಒಂದು ಸಲ ಸೆರಗಿನ ಕೊನೆಯನ್ನು ಕಣ್ಣ ಕುಣಿಕೆಗೆ ಸೋಕಿಸಿದ್ದುಂಟು ಎಲ್ಲರ ದುಃಖಕ್ಕಿಂತ ಅವಳ ದುಃಖ ಅಪಾರವಾಗಿತ್ತು, ಅದನ್ಯವಾಗಿತ್ತು, ಎಂಬಲ್ಲಿ ಸಂದೇಹವಿಲ್ಲ. ಅವಳು ತನ್ನ ದುಃಖಕ್ಕೆ ಅದಾವುದೋ ಸಾತ್ತ್ವಿಕ ನಿರ್ಧಾರದ ಕಟ್ಟೆ ಹಾಕಿದ್ದದ್ದು ಅವಳ ಗಂಭೀರ ಮುದ್ರೆಯಲ್ಲಿ ಎಚ್ಚೊತ್ತಿ ಕಾಣುತ್ತಿತ್ತು ತಂದೆತಾಯಿ, ಗೌರಮ್ಮನವರು ಹೇಳಿದ ಸಮಾಧಾನದ ಮಾತುಗಳು, ತೋರಿದ ಮರುಕ, ಇತ್ತ ಭರವಸೆ—ಯಾವುದೂ ಆ ಕಟ್ಟೆಯನ್ನು ಭೇದಿಸಲು ಸಮರ್ಥವಾಗಲಿಲ್ಲ. ಅದೆಂಥ ಸಹನೆ, ಅದೆಂಥ ತಾಳ್ಮೆ! ನನಗಂತೂ ಅರ್ಥ

ವಾಗಲಿಲ್ಲ. ಯಾರೇ ಆಗಲಿ, ಅದರಲ್ಲಿಯೂ ಹೆಣ್ಣು, ಅಳುವುದರಲ್ಲಿ ಮೊದಲಗೈಯಾದ ಹೆಣ್ಣು, ದುಃಖವನ್ನು ನುಂಗಿಕೊಂಡರೆ ಕಷ್ಟ ಎಂದು ನನಗೆ ನಿಜವಾಗಿ ಭಯವೆನಿಸಿತು. ಸ್ವಲ್ಪವಾದರೂ ಅಳದ ಅವಳನ್ನು ಇತರರು "ಅಳಬೇಡ ಅಮ್ಮ" ಎಂದು ಸಂತವಿಸುತ್ತಿದ್ದುದು ನನಗೆ ವಿಚಿತ್ರ ವಾಗಿ ಕಂಡಿತು.

ನಿಜವಾಗಿಯೂ ಆಗ ನನ್ನ ಮನಸ್ಸಿನಲ್ಲಿ ಮೂಡಿದ ಆಲೋಚನೆ ಯನ್ನು ಹೇಳಿಬಿಡುತ್ತೇನೆ. ಅವಳು ಎಂದೋ ಉನ್ಮಾದ ಗ್ರಸ್ತಳಾಗುತ್ತಾಳೆ, ಇಲ್ಲವೆ ಬಾವಿಗೆ ಮಗುಚಿಕೊಳ್ಳುತ್ತಾಳೆ ಎಂದು ನಿಶ್ಚಯಿಸಿಬಿಟ್ಟೆ. ನುಂಗಿ ಕೊಂಡ ದುಃಖ ಕಾರ್ಯಮುಖವಾಗದೆ ಇದ್ದೀತೆ?

ನಾನು ಹೆಚ್ಚು ದಿನ ರಜ ಪಡೆದಿರಲಿಲ್ಲ. ಅಂದಿನ ರಾತ್ರಿಯೇ ಬೆಂಗಳೂರಿಗೆ ಹಿಂದಿರುಗುವುದೆಂದು ತೀರ್ಮಾನ ಮಾಡಿದೆ. ತೆರಳುವ ಮುನ್ನ ನಾರಾಯಣಮೂರ್ತಿಗಳಿಗೆ ನನಗೆ ತೋರಿದ್ದನ್ನು ಹೇಳಿದೆ:

"ನನ್ನ ಕೈಲಾದದ್ದನ್ನು ಮಾಡಿದೆ. ನನ್ನಿಂದ ಏನೂ ಉಪಕಾರ ವಾಗಲಿಲ್ಲ. ನಾನು ಇನ್ನೇನು ಮಾಡಲಿ ಹೇಳಿ."

"ನೀನೇನು ಮಾಡುತ್ತಿ, ರಾಮು. ನಮ್ಮ ಗ್ರಹಚಾರ."

"ನನಗೆ ಒಂದು ತೋರುತ್ತೆ"

"ಏನೂ?"

"ಅವನು ಮದರಾಸಿನಲ್ಲಿ ಇನ್ನು ಹೆಚ್ಚುಕಾಲ ಬಹುಶಃ ಇರುವುದಿಲ್ಲ. ಅವನು ಅಲ್ಲಿಂದ ಕಾಲು ಕೀಳುವ ಮೊದಲೇ ಒಂದು ಸಲ ನೀವು ಭಾಗ್ಯಲಕ್ಷ್ಮಿ ಯನ್ನೂ ಕರೆದುಕೊಂಡು ಹೋಗಿ, ಒಂದು ಪ್ರಯತ್ನಮಾಡಿ ನೋಡುವುದು ಒಳ್ಳೆಯದು."

"ಅದಕ್ಕೇನಪ್ಪ, ಆಗಬಹುದು. ಭಾಗ್ಯಲಕ್ಷ್ಮಿಯೇ ಬಂದು ಕಾಲಿಗೆ ಬಿದ್ದರೂ ಬರುವುದಿಲ್ಲ ಅಂತ ಹೇಳಿದಾನೆ ಎಂದಲ್ಲವೆ ನೀನು ಹೇಳಿದ್ದು? ಅದನ್ನೂ ಮಾಡಿಬಿಡೋಣ. ನಾನೂ ಅವನ ಕಾಲಿಗೆ ಬಿದ್ದು ಬೇಡಿ ಕೊಳ್ಳುತ್ತೇನೆ ಬೇಕಾದರೆ"

"ಏನು, ಅವರ ಕಾಲಿಗೆ ಬಿದ್ದು ಬೇಡಿಕೊಳ್ಳುವುದೆ? ನಾನು ಅಂಥ ಅಪರಾಧವೇನನ್ನೂ ಮಾಡಿಲ್ಲ" ಎಂದು ಭಾಗ್ಯಲಕ್ಷ್ಮಿ ಕೆರಳಿ ನುಡಿದಳು.

ಕೋಪದ ಕವಚ ತೊಟ್ಟ ದುಃಖವದು.

“ ನಿನ್ನ ಮದುವೆಯಲ್ಲಿ ನಾರಾಯಣಮೂರ್ತಿಗಳು ತಮ್ಮ ಹಿಂದಿನ ಅನುಭವವೊಂದನ್ನು ನನಗೆ ಹೇಳಿದ್ದರಮ್ಮ. ನಿನ್ನ ತಾಯಿಯನ್ನು ಕೇಳು, ಅದನ್ನು ಹೇಳುತ್ತಾರೆ. ನಿನ್ನ ತಾಯಿ ಮಾಡಿದಂತೆ ನೀನು ಮಾಡುವುದು ತಪ್ಪೆ? ಪತಿಯ ಕಾಲಿಗೆ ಸತಿ ಎರಗುವುದು ನಾಚಿಗೆಗೇಡೇ, ಮಾಡಬಾರದ ಕೆಲಸವೆ? ಗಂಡನನ್ನು ಹೆಂಡತಿಯ ಕಣ್ಣೀರು ಗೆಲ್ಲದಿದ್ದರೆ ಇನ್ನು ಯಾವುದು ತಾನೇ ಗೆದ್ದೀತಮ್ಮ?''—ಎಂದು ನಾನು ಬೋಧಿಸಿದೆ.

“ನಾನು ಕಣ್ಣೀರು ಸುರಿಸಿಲ್ಲವೆ? ಸುರಿಸಿರುವುದು ಸಾಲದೆ? ಸುರಿಸಿ ಸುರಿಸಿ ನೀರೆಲ್ಲಾ ಬತ್ತಿಹೋಗಿದೆ. ಕಣ್ಣಿನಿಂದ ಕಾಣದಿದ್ದರೂ ಅವರಿಗೆ ಅದು ತಿಳಿಯದೆ?” ಎಂದು ಭಾಗ್ಯಲಕ್ಷ್ಮಿ ಕೋಣೆಗೆ ಓಡಿದಳು. ಅವಳ ಹಿಂದೆ ಅವಳ ತಾಯಿಯೂ ನಡೆದರು. ಈಗಲೀಗ ಅವಳ ದುಃಖದ ಕಟ್ಟೆಯೊಡೆಯಿತು. ಅವಳು ಬಿಕ್ಕಿಬಿಕ್ಕಿ ಅಳುತ್ತಿದ್ದುದು ನನಗೆ ಕೇಳಿ ಬಂದಿತು. ಅವಳು ಅತ್ತದ್ದೂ ನನಗೆ ಸಮಾಧಾನವೆನಿಸಿತು.

ಇದನ್ನೆಲ್ಲಾ ನೋಡುತ್ತ ನಾನು ಆ ರಾತ್ರಿ ಹೊರಡಲಾಗಲಿಲ್ಲ. ಮಾರನೆಯ ಬೆಳಗ್ಗೆ ಹೊರಟೆ ಹೊರಡುವ ಮುನ್ನ ಕಡೆಯ ಮಾತಾಗಿ ನಾರಾಯಣಮೂರ್ತಿಗಳಿಗೆ ಹೇಳಿದೆ:

“ ಏನಾದರೂ ಆಗಲಿ. ಸದ್ಯಕ್ಕಂತೂ ಕೃಷ್ಣಸ್ವಾಮಿಗೆ ಹಣ ಕಳಿಸುವುದನ್ನು ನಿಲ್ಲಿಸಬೇಡಿ. ಅವನನ್ನ ಮದರಾಸಿನಲ್ಲಿ ಕಟ್ಟಿಹಾಕುವುದಕ್ಕೆ ಅದೊಂದೇ ಮಾರ್ಗ.''

“ ನನ್ನ ಈ ಧನಸಂಪತ್ತೆಲ್ಲಾ ಕರಗಿ ಹೋದರೂ ಚಿಂತೆಯಿಲ್ಲ. ಭಾಗ್ಯಲಕ್ಷ್ಮಿಯ ಆ ಸೌಭಾಗ್ಯಸಂಪತ್ತನ್ನು ಪಡೆಯಲು ಏನು ಬೇಕಾದರೂ ತೆತ್ತೇನು '' ಎಂದು ನಾರಾಯಣಮೂರ್ತಿಗಳು ಗಳಗಳನೆ ಅತ್ತರು.

ನಾನು ಹೊರಡುವಾಗ, ಗಂಡನ ಕಾಲಿಗೆ ಎರಗುವುದಿಲ್ಲ ಎಂದ ಭಾಗ್ಯಲಕ್ಷ್ಮಿ ಬಂದು ನನ್ನ ಕಾಲಿಗೆ ಎರಗಿದಳು! “ಸೌಭಾಗ್ಯವತಿಯಾಗಿ ಬಾಳಮ್ಮ” ಎಂದು ಎದೆ ತುಂಬ ಹರಸಿದೆ.

## ನಿಷ್ಫಲ ಪ್ರಯತ್ನಗಳು

ಭಾಗ್ಯಲಕ್ಷ್ಮಿ ಕೃಷ್ಣಸ್ವಾಮಿಯ ಮುಖವನ್ನು ಎಂಟು ಹತ್ತು ವರ್ಷಕಾಲ ನೋಡಲಿಲ್ಲ ಎಂದು ಮೊದಲೇ ತಿಳಿಸಿಬಿಡುತ್ತೇನೆ. ಅವನನ್ನು ಕರೆತರುವುದಕ್ಕೆ ಮೊದಮೊದಲಲ್ಲಿ ಕೆಲವು ಪ್ರಯತ್ನಗಳು ನಡೆಯದೆ ಇರಲಿಲ್ಲ. ಅವನ್ನು ಇಲ್ಲಿ ಸಂಗ್ರಹವಾಗಿ ತಿಳಿಸುತ್ತೇನೆ.

ನಾನು ಸೂಚಿಸಿದಂತೆ ನಾರಾಯಣಮೂರ್ತಿಗಳು ಕೃಷ್ಣಸ್ವಾಮಿಗೆ ತಪ್ಪದೆ ಹಣ ಕಳಿಸುತ್ತಿದ್ದರು. ಶಾಮಣ್ಣ ಇನ್ನೂ ಜೈಲಿನಿಂದ ಬಿಡುಗಡೆಯಾಗಿ ಬಂದಿರಲಿಲ್ಲ. ಈ ನಡುವೆಯಲ್ಲಿ, ರಾಮಮೂರ್ತಿ ತನ್ನ ಕಾಲೇಜು ವ್ಯಾಸಂಗ ಮುಗಿಸಿ ಬಿ. ಎ. ಎನ್ನಿಸಿಕೊಂಡಿದ್ದ; ವೆಂಕಟೇಶ ಸೀನಿಯರ್ ಇಂಟರ್ ತರಗತಿಯಲ್ಲಿದ್ದ. ತುಂಬು ಯೌವನದ ಬಿಸಿರಕ್ತದ ರಾಮಮೂರ್ತಿ, "ನಾನು ಭಾವನನ್ನ ದರಗುಟ್ಟಿಕೊಂಡು ಎಳೆದು ತರುತ್ತೇನೆ" ಎಂದು ಶಪಥ ಮಾಡಿ ಮದರಾಸಿಗೆ ಹೊರಟ. ಅಲ್ಲಿಗೆ ಹೋಗುವ ಮುನ್ನ ಅವನು ಬೆಂಗಳೂರಿನಲ್ಲಿ ಇಳಿದು, ಕೃಷ್ಣಸ್ವಾಮಿಯ ನೆಲೆನಿಟ್ಟು ಇವನ್ನು ಕುರಿತು ನನ್ನನ್ನು ವಿಚಾರಿಸಿದ. ನಾನು ಅವನಿಗೆ ಅನ್ನಪೂರ್ಣ ವಿಲಾಸದ ಗೋಪಾಲನ ವಿಚಾರ ಹೇಳಿ, ಅವನನ್ನ 'ಸರಿಮಾಡಿಕೋ' ಎಂದು ಸಲಹೆ ಕೊಟ್ಟೆ. ಅವನು ತನ್ನ ಹುಡುಗಧೈರ್ಯದ ಬತ್ತಳಿಕೆಯಲ್ಲಿ ನನ್ನ ಸಪ್ಪೆಯ ಸಲಹೆಗಳ ಬಾಣಗಳನ್ನು ತುಂಬಿಕೊಂಡು ದಿಗ್ವಿಜಯಕ್ಕೆ ಹೊರಟ. ಸೋತು ಬಂದು, ಸೋಲಿನ ವರದಿಯನ್ನು ಮೊದಲು ನನಗೆ ಒಪ್ಪಿಸಿದ.

ನಾನು ಎಣಿಸಿದ್ದಂತೆ, ಗೋಪಾಲ ರಾಮಮೂರ್ತಿಗೆ ಮನೆಯ ಗುರುತು ತೋರಿಸುವುದರಲ್ಲಿ ಸಹಾಯಕನಾಗಿದ್ದ. ಅದಕ್ಕೆ ಈ ಸಲವೂ ಅವನಿಗೆ ತಕ್ಕಮಟ್ಟಿನ ಲಂಚ ಸಲ್ಲಿಸಿದ್ದಾಯಿತು. ಕೃಷ್ಣಸ್ವಾಮಿ ಕೇಳಿದರೆ, "ನನ್ನಿಂದ ಮನೆಯ ಗುರುತು ಗೊತ್ತಾಯಿತು ಎಂದು ಹೇಳು. ಗೋಪಾಲನ ಹೆಸರು ಹೇಳಬೇಡ. ಅವನಿಗೂ ಈ ಸಂಗತಿ ಮೊದಲೇ ತಿಳಿಸಿದ್ದರೆ ಅವನು ಮನೆ ತೋರಿಸುತ್ತಾನೆ. ನಾನು ಕೃಷ್ಣಸ್ವಾಮಿಯನ್ನು ಕಾಣಲು ಹೋದಾಗ ರಾತ್ರಿಯಾದ್ದರಿಂದ ಬೀದಿಯ ಗುರುತು ಕೂಡ ನನಗೆ ಹತ್ತಲಿಲ್ಲ"

ಎಂದು ರಾಮಮೂರ್ತಿಗೆ ಮುನ್ನೆಚ್ಚರಿಕೆ ಕೊಟ್ಟಿದ್ದೆ. ಆದ್ದರಿಂದ ಕೃಷ್ಣ ಸ್ವಾಮಿಯ ಮನೆಯ ಗುರುತು ಸಿಕ್ಕುವುದರಲ್ಲಿ ರಾಮಮೂರ್ತಿಗೆ ಏನೂ ತೊಂದರೆಯಾಗಲಿಲ್ಲ. ಕೃಷ್ಣಸ್ವಾಮಿ ಸಿಕ್ಕಿಯೂ ಸಿಕ್ಕಿದ. ಆದರೆ, ಅವನ ಮೂರ್ಖತನದ ಮುಂದೆ ರಾಮಮೂರ್ತಿಯ ವೀರಾವೇಶ ಏನೂ ನಡೆಯಲಿಲ್ಲ. ಉಮಾಬಾಯಿ, "ನೀನು ಜೋರು ಮಾಡಿದರೆ ಪೋಲೀಸರಿಗೆ ಹೇಳಿ ಕಳಿಸುತೇನೆ. ಅವರು ನನ್ನ ಯಜಮಾನರು ನಿಮ್ಮ ಅಕ್ಕ ನನಗೆ ಸವತಿಯಾಗಬೇಕು. ಅವಳಿಗೆ ಜೀವನಾಂಶ ಬೇಕಿದ್ದರೆ ಕೋರ್ಟಿಗೆ ಹೋಗಲಿ. ಇದು ನನ್ನ ಮನೆ. ಹೀಗಾದರೆ ನನ್ನ ಮನೆಗೆ ನೀವು ಯಾರೂ ಕಾಲಿಡಕೂಡದು. ಈ ವಿಷಯಕ್ಕಲ್ಲದಿದ್ದರೆ, ಯಾರು ಬೇಕಾದರೂ ಬನ್ನಿ; ಯಾವಾಗ ಬೇಕಾದರೂ ಬನ್ನಿ. ನಂಟರ ಹಾಗೆ ಇರಿ, ನಂಟರ ಹಾಗೆ ಹೋಗಿ" ಎಂದು ರಾಮಮೂರ್ತಿಗೆ ಉಪನ್ಯಾಸ ಮಾಡಿದಳಂತೆ. ಕೃಷ್ಣಸ್ವಾಮಿಯೊಂದಿಗೆ ಕಾದಾಡಿದವನು ಉಮಾಬಾಯಿಯ ಬಾಯಿಗೆ ಹೆದರಿ ಹಿಮ್ಮೆಟ್ಟಿ ಬಂದ ರಾಮಮೂರ್ತಿ.

ಇನ್ನು ನಾರಾಯಣಮೂರ್ತಿಗಳೆ ಭಾಗ್ಯಲಕ್ಷ್ಮಿಯನ್ನು ಮದರಾಸಿಗೆ ಕರೆದುಕೊಂಡು ಹೋಗಿ ಬಿಟ್ಟು ಬರುವ ಕಾರ್ಯವೊಂದು ಉಳಿಯಿತು. ಆದರೆ ಇದಕ್ಕೆ ಭಾಗ್ಯಲಕ್ಷ್ಮಿ ಒಪ್ಪಲಿಲ್ಲ.

ರಾಮಮೂರ್ತಿ ಬಿ. ಎ. ಮಾಡಿದ್ದನಷ್ಟೆ. ಅವನು ಮದರಾಸಿಗೆ ಹೋದದ್ದರಿಂದ, ಅವನ ತಲೆಗೆ ಒಂದು ಹುಳು ಹೊಕ್ಕಿತು. "ನಾನು ಬಿ. ಎಲ್. ಪರೀಕ್ಷೆಗೆ ಓದಲು ಮದರಾಸಿಗೆ ಹೋಗುತ್ತೇನೆ. ಮದರಾಸಿನಲ್ಲೇ ಇದ್ದರೆ, ಹೇಗಾದರೂ ಮಾಡಿ ಭಾವನನ್ನ ಕರೆದುಕೊಂಡು ಬರಲು ಸಾಧ್ಯ ವಾಗುತ್ತೆ" ಎಂದು ಅವನು ತನ್ನ ತಂದೆಗೆ ಹೇಳಿದ. ಅದಕ್ಕೆ ಅವರು, "ಅಳಿಯ ಒಬ್ಬ ಬಿ. ಎಲ್. ಮಾಡಿ ಆಯಿತು. ಇನ್ನು ನೀನು ಬಿ. ಎಲ್. ಮಾಡಿ ಉದ್ಧಾರವಾಗಬೇಕೋ? ಮದರಾಸೂ ಬೇಡ ಬೊಂಬಾಯಿಯೂ ಬೇಡ. ಬಿ. ಟಿ. ಗೆ ಸೇರಿಕೋ" ಎಂದು ಖಂಡಿತವಾಗಿ ಹೇಳಿಬಿಟ್ಟರು. ರಾಮಮೂರ್ತಿ ಬೇರೆ ದಾರಿಯಿಲ್ಲದೆ ಬಿ. ಟಿ. ತರಗತಿಗೆ ಸೇರಿದ.

ಶಾಮಣ್ಣ ಜೈಲಿನಿಂದ ಬಿಡುಗಡೆ ಹೊಂದಿ, ಮೈಸೂರಿಗೆ ಹಿಂದಿರುಗಿ, ನಾರಾಯಣಮೂರ್ತಿಗಳಿಗೆ ಹೇಳಿ ಅಂಗಡಿಯ ಕೆಲಸವನ್ನು ವಹಿಸಿಕೊಂಡ

ಮೇಲೆ, ಅವರಿಗೆ ಮತ್ತೆ ಆಶೆ ಮರುಕೊಳಿಸಿತು. ಈ ಸಲ ಶಾಮಣ್ಣ ರಾಯಭಾರಿಯಾಗಿ ಮದರಾಸಿಗೆ ಪ್ರಯಾಣ ಮಾಡಿದ.

ಕೃಷ್ಣಸ್ವಾಮಿ ಶಾಮಣ್ಣನನ್ನು ಆದರದಿಂದಲೇ ಬರಮಾಡಿಕೊಂಡ. ಸಂಧಾನವಾದ ಮೇಲೆ, ಕೃಷ್ಣಸ್ವಾಮಿ ಶಾಮಣ್ಣನಿಗೆ ಹೇಳಿದ ತೀರ್ಮಾನದ ಮಾತುಗಳಿವು :—

"ನೀವೆಲ್ಲಾ ಹೇಳುವಂತೆ ನಾನು ಕೆಟ್ಟದಾರಿ ಹಿಡಿದೆ. ಭಾಗ್ಯಲಕ್ಷ್ಮಿಯನ್ನು ತೊರೆದೆ. ಒಪ್ಪಿಕೊಳ್ಳುತ್ತೇನೆ. ಅವಳು ಬಹಳ ಒಳ್ಳೆಯವಳು. ಅದನ್ನೂ ಒಪ್ಪಿಕೊಳ್ಳುತ್ತೇನೆ. ಈ ಉಮಾ ನನಗೆ ಸೂರೆಗೊಟ್ಟಿರುವ ಸುಖವನ್ನು ಅವಳು ಕೊಡಬಲ್ಲಳೆ? ಈಗ ನಾನು ಹೋಟಲಿನಿಂದ ಕೂಡ ಊಟ ತರಿಸಿಕೊಳ್ಳುವುದಿಲ್ಲ ಅವಳದ್ದೇ ಅಡಿಗೆ. ಅದರ ಸವಿಯನ್ನು ನೀನೇ ನೋಡಿದ್ದೀ. ಮನೆ ನೋಡು, ಹೇಗೆ ಇಟ್ಟುಕೊಂಡಿದಾಳೆ? ಅದೇನು ಅಚ್ಚುಕಟ್ಟು, ಅದೇನು ಸೊಬಗು! ಇಬ್ಬರೂ ಒಟ್ಟಿಗೆ ಸಿನಿಮಾಕ್ಕೆ ಹೋಗುತ್ತೇವೆ; ಒಟ್ಟಿಗೆ ಬೀಚಿಗೆ ಹೋಗಿ ತಿರುಗಾಡುತ್ತೇವೆ. ಅವಳು—ಹಿಂದೆ ಏನಾದರೂ ಆಗಿರಲಿ–ಈಗ ವೇಶ್ಯೆಯಲ್ಲ; ಹೆಂಡತಿಗಿಂತ ಹೆಚ್ಚು; ನನ್ನ ಹೃದಯದ ದೇವಿ. ಭಾಗ್ಯಲಕ್ಷ್ಮಿ ಮನೆಗೆ ಮಾತ್ರ ಒಡತಿಯಾಗಿದ್ದಳು; ಇವಳು ನನ್ನ ಇಲ್ಲಿನ ಮನೆ, ಮನಸ್ಸು. ಹೃದಯ-ಎಲ್ಲಕ್ಕೂ ಒಡತಿಯಾಗಿದ್ದಾಳೆ. ಅಲ್ಲದೆ, ನನ್ನನ್ನು, ನಂಬಿಕೊಂಡು ಶಾಸ್ತ್ರದ ಪ್ರಕಾರ ಕೈಹಿಡಿಯದಿದ್ದರೂ ನಿಜವಾಗಿ ಕೈಹಿಡಿದಿದಾಳೆ. ನಾನು ಅವಳ ಕೈಬಿಡಲಾರೆ. ಇವಳು ದಿಕ್ಕಿಲ್ಲದವಳು; ಬಡವೆ. ಭಾಗ್ಯಲಕ್ಷ್ಮಿಗೇನು ಕೊರತೆ? ಹಣವಂತರ ಮಗಳು. ನನ್ನ ನೆರವಿಲ್ಲದೆಯೇ ಅವಳು ಬದುಕಬಲ್ಲಳು."

ಈ ಮಾತುಗಳನ್ನು ಕೇಳಿ, ಶಾಮಣ್ಣ ಅವನಿಗೆ ಪರಿಪರಿಯಲ್ಲಿ ಬೋಧಿಸಿದ. ಹೊಟ್ಟೆ ಹೊರೆಯುವುದೇ ಮುಖ್ಯವಲ್ಲವೆಂದೂ, ಹೆಂಡತಿಯೆನಿಸಿದವಳಿಗೆ ಗಂಡನ ಸಾನ್ನಿಧ್ಯವೆ ಪರಮಪದವೆಂದೂ, ಪತಿಯ ಕಷ್ಟನಿಷ್ಠುರಗಳಲ್ಲಿ ಭಾಗಿಯಾಗಿ ಅವನ ಸಹಧರ್ಮಿಣಿಯಾಗಿರುವುದೇ ಸತಿಯ ಕರ್ತವ್ಯವೆಂದೂ, ಹೆಂಡತಿ ಗಂಡನ ನೆರಳೆಂದೂ, ಅವನು ಇದ್ದಕಡೆ ಇರುವುದೇ ಅವಳಿಗೆ ಶ್ರೇಯಸ್ಸೆಂದೂ, ಇದೇ ಅವಳ ಸೌಭಾಗ್ಯವೆಂದೂ, ಇದನ್ನು ಪಡೆದವಳೇ ನಿಜವಾದ ಸೌಭಾಗ್ಯವತಿಯೆಂದೂ, ಇದಿಲ್ಲದವಳು ಗಂಡನಿದ್ದೂ

ಇಲ್ಲದ ವಿಧವೆಯೆಂದೂ ಶಾಮಣ್ಣ ಕೃಷ್ಣಸ್ವಾಮಿಗೆ ಸ್ವಲ್ಪ ಕಾವ್ಯಮಯವಾದ ಭಾಷೆಯಲ್ಲಿಯೇ ಉಪದೇಶಮಾಡಿದನು. ಪೂರ್ವಗ್ರಹದೂಷಿತನಾದ ಕೃಷ್ಣ ಸ್ವಾಮಿಗೆ ಇದೊಂದೂ ಹಿಡಿಸಲಿಲ್ಲ ತಾನು ಖಂಡಿತ ಹಿಂದಿರುಗಲು ಸಿದ್ಧನಾಗಿಲ್ಲವೆಂದು ಹೇಳಿಬಿಟ್ಟ.

"ನೀನು ಹಿಂದಿರುಗಬೇಡವಯ್ಯ, ಅವಳೇ ಇಲ್ಲಿಗೆ ಬರುತ್ತಾಳೆ. ಹೇಗೂ ನೀನು ಇಲ್ಲಿಯೇ ಉದ್ಯೋಗದಲ್ಲಿದೀಯೆ. ನೀನೇನೂ ಬರ ಬೇಕಾಗಿಲ್ಲ; ನಾರಾಯಣಮೂರ್ತಿಗಳೋ ನಾನೋ ಅವಳನ್ನ ಕರೆದು ಕೊಂಡು ಬಂದು ಬಿಟ್ಟು ಹೋಗುತ್ತೇವೆ. ಮುಖ್ಯ, ನಿವೀಬ್ಬರೂ ಒಟ್ಟಿಗೆ ಮತ್ತೆ ಸಂಸಾರ ಮಾಡಿಕೊಂಡಿರಬೇಕೆಂದು ನಮ್ಮೆಲ್ಲರ ಆಶೆ."

"ಅವಳು ಬಂದರೆ ಇವಳ ಸೇವೆಮಾಡಿಕೊಂಡಿರಬೇಕಾಗುತ್ತೆ ಅಷ್ಟೆ. ಈಗ ನನ್ನನ್ನ ಕ್ರೂರಿ ಎನ್ನುತ್ತೀರಿ. ಆಗ ನೀಚನೂ ಆಗುತ್ತೇನೆ."

"ಇವಳನ್ನು ಬಿಟ್ಟುಬಿಡು."

"ಅದು ಹೇಗೆ ಸಾಧ್ಯ?"

"ತಾಳಿಕಟ್ಟಿದ ಹೆಂಡತಿಯನ್ನೆ ಬಿಟ್ಟವನಿಗೆ ಹೇಗೆ ಎಂದು ತಿಳಿಸಬೇಕೆ?"

"ತಾಳಿಕಟ್ಟಿದ ಹೆಂಡತಿಯನ್ನು ನಾನು ಮೋಹಿಸಿ ಮದುವೆಯಾಗಲಿಲ್ಲ."

"ಹಾಗಾದರೆ ಯಾರನ್ನ ಮೋಹಿಸಿದ್ದೆ?"

ಕೃಷ್ಣಸ್ವಾಮಿ ಕೆಲಕಾಲ ಮೌನವಾಗಿದ್ದ. ಶಾಮಣ್ಣನ ಪ್ರಶ್ನೆಯ ಹಿಂದೆ ಅಡಗಿದ್ದ ಅರ್ಥ ಅವನಿಗೆ ವೇದ್ಯವಾಗದೆ ಇರಲಿಲ್ಲ.

"ಯಾರನ್ನ ಮೋಹಿಸಿದ್ದೆನೋ ಇಲ್ಲವೋ ಆ ಪ್ರಶ್ನೆ ಈಗ ಯಾಕೆ? ಇವಳನ್ನ ಈಗ ಮೋಹಿಸಿದ್ದೇನೆ."

"ಮೋಹ ಕ್ಷಣಿಕವಾದ್ದು; ಮೋಹ ಪ್ರೇಮವಲ್ಲ; ಪ್ರೇಮವೇ ಶಾಶ್ವತವಾದ್ದು. ಪ್ರೇಮ ನಿಲ್ಲತಕ್ಕದ್ದು, ಮೋಹ ಮಾಯವಾಗತಕ್ಕದ್ದು."

"ಮೋಹ ಮಾಯವಾಗತಕ್ಕದ್ದು, ಹೌದು. ಅದು ಮಾಯವಾದಾಗ ಮೋಹಿನಿಯೂ ಮಾಯವಾಗುತ್ತಾಳೆ. ಅವಳನ್ನು ಆಗ ಬಿಡುವುದು ಸುಲಭ. ಈಗ ಕಷ್ಟ."

"ಆಗ ಇನ್ನೊಬ್ಬಳು ಮೋಹಿನಿ ಕಣ್ಣೆದುರಿಗೆ ಸುಳಿಯುತ್ತಾಳೆ."

"ಅವಳ ಬೆನ್ನು ಹತ್ತುತ್ತೇನೆ."

"ಇದಕ್ಕೆ ಕೊನೆಯೆಂದು?"

"ನಾನು ಸತ್ತಾಗ."

ಈ ಮಾತಿನಿಂದ ಶಾಮಣ್ಣನಿಗೆ ಬೇಸರವಾದರೂ ಬೇಸರವನ್ನು ತೋರ್ಪಡಿಸಲಿಲ್ಲ.

"ನಾನು ಹೇಳುವುದನ್ನ ಹೇಳಿದ್ದೇನೆ. ಇನ್ನುರ ಮೇಲೆ ನಿನ್ನ ಇಷ್ಟ. ಕಾಂಗ್ರೆಸ್ ಕೆಲಸದ ಸಂಬಂಧವಾಗಿಯೂ ನನ್ನ ಅಂಗಡಿಯ ಸಂಬಂಧವಾಗಿಯೂ ನಾನು ಮದರಾಸಿಗೆ ಆಗಾಗ ಬರುತ್ತಿರುತ್ತೇನೆ. ಬಂದಾಗ ನಿನ್ನನ್ನ ನೋಡಿಕೊಂಡು ಹೋಗಲು ನಿನ್ನ ಅಭ್ಯಂತರವಿಲ್ಲವಷ್ಟೆ?"

"ಅಗತ್ಯವಾಗಿ ಬಾ. ಇಲ್ಲಿಯೇ ಇಳಿದುಕೊ. ಆದರೆ ಈ ಪ್ರಸ್ತಾವ ಮಾತ್ರ ಎತ್ತಬೇಡ."

"ನಿನ್ನ ಹೆಂಡತಿ ಮಕ್ಕಳ ಕ್ಷೇಮಸಮಾಚಾರ ನಿನಗೆ ತಿಳಿಸುತ್ತೇನೆ. ನಿನ್ನ ಕ್ಷೇಮಸಮಾಚಾರ ಅವರಿಗೆ ತಿಳಿಸುತ್ತೇನೆ. ಇದಕ್ಕೆ ನಿನ್ನ ಅಡ್ಡಿಯಿಲ್ಲವಲ್ಲ?"

"ಇದರಿಂದ ನನಗೇನೂ ಪ್ರಯೋಜನವಿಲ್ಲ."

"ಆದರೆ ಅವರಿಗೆ ಪ್ರಯೋಜನವಿದೆ."

"ಪದೇ ಪದೇ ನನ್ನನ್ನ ಕಾಡುವುದು ತಾನೆ?"

"ನೀನು ಧೈರ್ಯವಾಗಿರಬಹುದು. ಅವರು ಪದೇ ಪದೇ ನಿನ್ನನ್ನ ಕಾಡುವುದಿಲ್ಲ. ಒಂದು ಸಲ ನಾರಾಯಣಮೂರ್ತಿಗಳೂ ಭಾಗ್ಯಲಕ್ಷ್ಮಿಯೂ ಇಲ್ಲಿಗೆ ಬಂದರೂ ಬರಬಹುದು. ನೀನು ಹೀಗೆಯೇ ಮೊಂಡತನ ಮಾಡಿದರೆ, ಭಾಗ್ಯಲಕ್ಷ್ಮಿಯೂ ಮೊಂಡತನ ಮಾಡಿ ಇಲ್ಲಿಯೇ ಇದ್ದುಬಿಡಬಹುದು. ಇಲ್ಲವೆ, ನಿನ್ನ ಆಸೆ ತೊರೆದು ಹಿಂತಿರುಗಬಹುದು. ಇನ್ನುರಮೇಲೆ ಅವರ ಕಾಟವನ್ನು ಸಂಪೂರ್ಣವಾಗಿ ತಪ್ಪಿಸಿಕೊಳ್ಳಬೇಕೆಂದರೆ, ನಮಗೆ ತಿಳಿಸದೆ ನೀನು ಬೇರೆಯ ಊರಿಗೆ ಹೋಗಬಹುದು."

"ಅಂಥ ಹೆದರಿಕೆಯೇನೂ ಇಲ್ಲ. ನಾನು ಒಂದೆರಡು ವರ್ಷದಲ್ಲಿ ಬ್ಯಾಂಕಿನ ಮ್ಯಾನೇಜರಾಗುವ ಸಂಭವವಿದೆ. ಒಳ್ಳೆಯ ಕೆಲಸ ಬಿಟ್ಟು ಬೇರೆಯ ಕಡೆ ಏಕೆ ಹೋಗಲಿ?"

"ಇನ್ನೊಂದು ಪ್ರಶ್ನೆ."

"ಏನು?"

"ಭಾಗ್ಯಲಕ್ಷ್ಮಿಯನ್ನು ಬಿಡುವ ಹಟ ತೊಟ್ಟಿರುವವನು, ನಾರಾಯಣ ಮೂರ್ತಿಗಳಿಂದ ಹಣ ಏಕೆ ತರಿಸಿಕೊಳ್ಳುತ್ತಾ ಇದೀಯೋ?"

"ನಾನು ತರಿಸಿಕೊಳ್ಳುತ್ತಾ ಇಲ್ಲ. ಅವರೇ ಕಳಿಸುತ್ತಾ ಇದಾರೆ."

"ಓಹೋ, ಹಾಗೋ. ನನಗೆ ತಿಳಿಯದು."

ಶಾಮಣ್ಣನ ಕಾರ್ಯಭಾರವೂ ನಿಷ್ಫಲವಾದುದನ್ನು ಕಂಡು ನಾರಾಯಣ ಮೂರ್ತಿಗಳಿಗೆ ತುಂಬ ನಿರಾಶೆಯಾಯಿತು: ದುಃಖವಾಯಿತು. ಭಾಗ್ಯ ಲಕ್ಷ್ಮಿಯನ್ನ ಮದರಾಸಿಗೆ ಕರೆದುಕೊಂಡು ಹೋಗಿ ಕಡೆಯ ಪ್ರಯತ್ನ ಮಾಡಿ ನೋಡಬೇಕೆಂದು ಜಯಲಕ್ಷಮ್ಮನವರ ಆಶೆ. ಅದಕ್ಕೆ ಗೌರಮ್ಮನ ವರು ಹೀಗೆ ಹೇಳಿದರು:—

"ನಮ್ಮ ನಾಣು ನಿನ್ನನ್ನ ಮೋಸಹೋಗಿ ಮದುವೆಯಾಗಿ ನೀನು ಬೇಡ ಅಂತ ಹಟ ಹಿಡಿದಿದ್ದಾಗ ನೀನು ಧೈರ್ಯಮಾಡಿ ನಮ್ಮ ಮನೆಗೆ ಬಂದು ಇದ್ದು ಅವನನ್ನ ಗೆದ್ದೆ. ನಿನಗೆ ನಮ್ಮ ಒತ್ತಾಸೆಯೂ ಇತ್ತು. ಆದರೆ ನಮ್ಮ ನಾಣು ಯಾರನ್ನೂ ಕಟ್ಟಿಕೊಂಡಿರಲಿಲ್ಲವಲ್ಲ. ಇದು ನನ್ನ ನಿನ್ನ ಕಾಲವಲ್ಲವಮ್ಮ ಕಾಲ ಬದಲಾಯಿಸಿದೆ. ಅಲ್ಲದೆ, ಕೃಷ್ಣಸ್ವಾಮಿ ಅದು ಯಾವಳೋ ಉಷಾ ರಾಣಿಯನ್ನ ಕಟ್ಟಿಕೊಂಡಿದಾನಂತೆ. ಭಾಗ್ಯ ಲಕ್ಷ್ಮಿಯನ್ನ ಅವನ ಹತ್ತಿರಕ್ಕೇ ಸೇರಿಸದೆ ಹೋದಮೇಲೆ, ಅವನನ್ನ ಅವಳು ಗೆದ್ದು ಕರೆತರವುದು ಹೇಗೆ? ಸೂಳೆಗೆ ಸೋತವನು ಹೆಂಡತಿಯ ಹಿಂದೆ ಬರುತ್ತಾನೆಯೇ? ಅಗದ ಹೋಗದ ಮಾತು. ಸುಮ್ಮನೆ ಅವನ ಮುಖ ನೋಡಿಕೊಂಡು ಬರುವುದಕ್ಕೆ ಬೇಕಾದರೆ ಮದರಾಸಿಗೆ ಹೋಗಿ ಬರ ಬಹುದು. ಅವನಿಗೆ ದೇವರು ಒಳ್ಳೆಯ ಬುದ್ಧಿ ಕೊಡಬೇಕು. ದೇವರ ಮೇಲೆ ಭಾರ ಹಾಕಿ ತೆಪ್ಪನಿರುವುದು ಮೇಲು."

ನಾರಾಯಣಮೂರ್ತಿಗಳು ಭಾಗ್ಯಲಕ್ಷ್ಮಿಯನ್ನು ಮದರಾಸಿಗೆ ಕರೆದು ಕೊಂಡು ಹೋಗುವ ಆಲೋಚನೆಯನ್ನು ಸಂಪೂರ್ಣವಾಗಿ ತ್ಯಜಿಸಿದರು.

೨೬

# ಗೃಹಕೃತ್ಯದಲ್ಲಿ ಮಾರ್ಪಾಟು

ಶಾಮಣ್ಣ ಜೈಲಿನಿಂದ ಹೊರಕ್ಕೆ ಬಂದಮೇಲೆ ಮೈಸೂರು ನಗರದ ಕಾಂಗ್ರೆಸ್ ಪಕ್ಷದ ಒಬ್ಬ ಪ್ರಮುಖ ಸದಸ್ಯನಾಗಿದ್ದ. ಶಾಮಣ್ಣನ ಅಂಗಡಿ ಬಹಳ ಕಿರಿದಾದರೂ ಅವನ ವ್ಯಕ್ತಿಪ್ರಭಾವ ಹಿರಿದಾಗಿ ದೇಶಾಭಿಮಾನಿಗಳೂ ವಿದ್ಯಾರ್ಥಿಗಳೂ ಹೆಚ್ಚಾಗಿ ಅವನ ಅಂಗಡಿಗೇ ವ್ಯಾಪಾರಕ್ಕೆ ಹೋಗುತ್ತಿದ್ದರು. ಬೀಳುಬಿದ್ದಿದ್ದ ಅವನ ಅಂಗಡಿ ಏಳತೊಡಗಿತ್ತು. ಕುದುರುತ್ತಿದ್ದ ವ್ಯಾಪಾರಕ್ಕೆ ತಕ್ಕಷ್ಟು ಬಂಡವಾಳವಿರಲಿಲ್ಲವೆನ್ನುವುದೇ ಅವನ ಕೊರತೆಯಾಗಿತ್ತು.

ಕಾಂಗ್ರೆಸ್ ಸಂಬಂಧವಾಗಿಯೂ ವ್ಯಾಪಾರ ಸಂಬಂಧವಾಗಿಯೂ ಅವನು ಬೆಂಗಳೂರಿಗೆ ಪದೇ ಪದೇ ಬರುತ್ತಿದ್ದ; ಮದರಾಸಿಗೆ ವರ್ಷಕ್ಕೊಮ್ಮೆ ಯಾದರೂ ಹೋಗದೆ ಇರುತ್ತಿರಲಿಲ್ಲ. ಹಾಗೆ ಹೋಗುವುದರಲ್ಲಿ ಕೃಷ್ಣ ಸ್ವಾಮಿಯ ಸಂಪರ್ಕವನ್ನಿಟ್ಟುಕೊಳ್ಳಬೇಕೆಂದೂ ಅವನು ಉದ್ದೇಶಪಟ್ಟಿದ್ದ. ಅದೇನು ಕಾರಣವೋ ಏನೋ, ಭಾಗ್ಯಲಕ್ಷ್ಮಿಯಲ್ಲಿ ಅವನಿಗೆ ಅಷ್ಟೊಂದು ವಾತ್ಸಲ್ಯ ಮೂಡಿ ಬೆಳೆದಿತ್ತು. ಕೃಷ್ಣಸ್ವಾಮಿಯನ್ನು ಕರೆತರುವುದಂತೂ ತನ್ನಿಂದ ಆಗಲಿಲ್ಲ, ಅವನ ಕ್ಷೇಮಸಮಾಚಾರವನ್ನು ತಂದು ತಿಳಿಸುತ್ತಿರುವು ದಾಗಿ ಅವನು ಅವಳಿಗೆ ತಾನಾಗಿ ನಂಬಿಕೆಕೊಟ್ಟಿದ್ದ. ಹೀಗಾಗಿ, ಮದರಾಸು ಮೈಸೂರುಗಳ ಸಮಾಚಾರ ನನಗೆ ಆಗಾಗ್ಗೆ ತಿಳಿದುಬರುತ್ತಿತ್ತು.

ಮೊದಲೇ ಹೇಳಿದಂತೆ, ಹತ್ತು ವರ್ಷದ ಅವಧಿಯಲ್ಲಿ ನಾರಾಯಣ ಮೂರ್ತಿಗಳ ಗೃಹಕೃತ್ಯದಲ್ಲಿ ಬಹಳ ಮಾರ್ಪಾಟಾಯಿತು; ನಡೆಯಲೇ ಬೇಕಾದ ಕೆಲವು ಘಟನೆಗಳು ನಡೆದೇ ನಡೆದುವು.

ರಾಮಮೂರ್ತಿಗೆ ಬಿ. ಟಿ. ಪ್ಯಾಸಾದ ತರುಣದಲ್ಲಿಯೇ ಮದುವೆ ಯಾಯಿತು. ಮದುವೆಯಾದ ವರ್ಷದಲ್ಲಿಯೇ ಸೊಸೆ ಮನೆಗೆ ಬಂದಳು. ಅವಳು ಮನೆಗೆ ಬಂದ ವರ್ಷದೊಳಗೆ ಮನೆಯಲ್ಲೊಂದು ತೊಟ್ಟಿಲು ಕಟ್ಟಿತು. ರಾಮಮೂರ್ತಿಗೆ ಸರ್ಕಾರದ ಹೈಸ್ಕೂಲೊಂದರಲ್ಲಿ ಬದಲಿ ಕೆಲಸ ಸಿಕ್ಕಿತು; ಖಾಯಮಲ್ಲದ ಕೆಲಸದಲ್ಲಿದ್ದ ಅವನನ್ನು ಇಲಾಖೆಯವರು ಮೂರು ತಿಂಗಳಿಗೆ ಒಮ್ಮೆ ಬೇರೆ ಬೇರೆ ಊರುಗಳಿಗೆ ಎಸೆಯುತ್ತಿದ್ದರು. ಆಮೇಲೆ ವರ್ಷಕ್ಕೆ

ಒಂದು ಸಲವಾದರೂ ವರ್ಗವಾಗದೆ ಇರುತ್ತಿರಲಿಲ್ಲ. ಈ ಕಾರಣದಿಂದ ಅವನ ಹೆಂಡತಿ ಇಂದಿರಾ ನಾರಾಯಣಮೂರ್ತಿಗಳ ಮನೆಯಲ್ಲಿ ಉಳಿಯ ಬೇಕಾಯಿತು. ಇಂದಿರಾ ತೀರ ಈಗಿನ ಕಾಲದವಳು. ಬೆಡಗಿನ ಹುಡುಗಿ. ತಾನಾಯಿತು, ತನ್ನ ಮಗುವಾಯಿತು. ಕುಳಿತ ಕಡೆ ಬಿಟ್ಟು ಕದಲುತ್ತಿರಲಿಲ್ಲ. ಗೌರಮ್ಮನವರ ಶಕ್ತಿ ದಿನದಿನಕ್ಕೆ ಉಡುಗುತ್ತಿತ್ತು. ಗೃಹಕೃತ್ಯದ ಭಾರವೆಲ್ಲ ಜಯಲಕ್ಷಮ್ಮನವರ ಮೇಲೆ ಬಿದ್ದದ್ದಲ್ಲದೆ, ದಿನದಿನಕ್ಕೆ ಹೆಚ್ಚುತ್ತಿತ್ತು. ಭಾಗ್ಯಲಕ್ಷ್ಮಿ ತಾಯಿಗೆ ನೆರವಾಗುತ್ತಿದ್ದಳು.

ಇಂದಿರೆಗೆ ಭಾಗ್ಯಲಕ್ಷ್ಮಿಯ ಮೇಲೆ ನಿಷ್ಕಾರಣವಾದ ಅಸೂಯೆ. ಅಥವಾ ಅವಳ ದೃಷ್ಟಿಯಿಂದ ಕಾರಣವೂ ಇದ್ದಿತೆನ್ನೋಣ. ರಾಮಮೂರ್ತಿ ಯಿಂದ ಅವಳಿಗೆ ಕೃಷ್ಣಸ್ವಾಮಿಯ ಕಥೆಯೆಲ್ಲಾ ತಿಳಿದುಬಂದಿತ್ತು. ನಾರಾಯಣಮೂರ್ತಿಗಳು ಕೃಷ್ಣಸ್ವಾಮಿಗೆ ಮೊದಲಿನಷ್ಟಲ್ಲದಿದ್ದರೂ ಐವತ್ತಕ್ಕೆ ಕಡಮೆಯಿಲ್ಲದಂತೆ ಪ್ರತಿ ತಿಂಗಳೂ ಹಣ ಕಳಿಸುತ್ತಿದ್ದರು. "ಅಳಿಯನ ಅಪವ್ಯಯಕ್ಕೆ ಹಣ ತೆತ್ತು ಮಕ್ಕಳ ಬಾಯಿಗೆ ಮಣ್ಣು ಹಾಕುತ್ತಿದಾರೆ" ಎಂದು ಇಂದಿರೆ ಎಲ್ಲರ ಕಿವಿಗೂ ಬೀಳುವಂತೆಯೇ ಆಡಿಬಿಟ್ಟಳು. ಭಾಗ್ಯಲಕ್ಷ್ಮಿಗೆ ಬಹು ನೋವಾಯಿತು. "ನನ್ನಾಣೆ, ಅವರಿಗೆ ಹಣ ಕಳಿಸಬೇಡಿ" ಎಂದು ಅವಳು ತಂದೆಯನ್ನು ಬೇಡಿಕೊಂಡು, ಕೃಷ್ಣಸ್ವಾಮಿಗೆ ಹಣ ಕಳಿಸುತ್ತಿದ್ದುದನ್ನು ನಿಲ್ಲಿಸಿದಳು. ಕೃಷ್ಣಸ್ವಾಮಿಗೆ ಇದರಿಂದ ವ್ಯಥೆಯೇನಾಗಲಿಲ್ಲ. ಅವನು ನಿರೀಕ್ಷಿಸಿದ್ದಂತೆ ಅವನು ಬ್ಯಾಂಕಿನ ಮ್ಯಾನೇಜರಾಗಿ ತಿಂಗಳಿಗೆ ಇನ್ನೂರೈವತ್ತು ಸಂಬಳ ತರುತ್ತಿದ್ದ. ಈ ಸಂಗತಿ ಯನ್ನು ಶಾಮಣ್ಣ ಮನೆಯಲ್ಲಿ ತಿಳಿಸಿದಾಗ, "ಹೆಂಡತಿಯನ್ನು ಕೈ ಬಿಟ್ಟವನು ಸಾವಿರ ಸಂಪಾದನೆ ಮಾಡಿದರೆ ತಾನೆ ಬಂದ ಭಾಗ್ಯವೇನು? ನಮಗೆ ಇಲ್ಲಿ ಚೊಕ್ಕಟವಾಗುವುದು ತಪ್ಪಲಿಲ್ಲ" ಎಂದು ಎಲ್ಲರಿಗಿಂತ ಮುಂದಾಗಿ ಇಂದಿರೆ ಬಿರುನುಡಿಯಾಡಿದಳು.

ಮೂರು ವರ್ಷದ ಹಸುಳೆ ಶ್ಯಾಮಸುಂದರನ ಮೇಲೆ ಇಂದಿರೆಗೆ ತುಂಬ ಆಕ್ರೋಶ. ತಬ್ಬಲಿಯಲ್ಲದಿದ್ದರೂ ತಬ್ಬಲಿಯಂತೆ ಕಾಣುತ್ತಿದ್ದ ಶ್ಯಾಮಸುಂದರನನ್ನು ಮನೆಯವರೆಲ್ಲ ಮುದ್ದಾಡುವುದು ಅವಳಿಗೆ ಸಹಿಸು ತ್ತಿರಲಿಲ್ಲ. ಶ್ಯಾಮಸುಂದರ ಚೆಲುವು ಗಂಡಾದರೂ ಸ್ವಲ್ಪ ಮಟ್ಟಿಗೆ

ಅಜ್ಜಿಯನ್ನು ಹೋಲುತ್ತಿದ್ದ—ಬಣ್ಣದಲ್ಲಿ. "ಬಂಗಾರದ ಬೊಂಬೆ ಬಿಟ್ಟು ಆ ಚಂದನದ ಕೊರಡನ್ನು ಏನಂತ ಹಾಗೆ ಎಲ್ಲರೂ ಮುದ್ದಾಡುತ್ತಾರೆಯೋ ನಾನು ಬೇರೆ ಕಾಣೆ" ಎಂದು ಇಂದಿರೆ ಕೊಂಕುನುಡಿಯಾಡುತ್ತಿದ್ದಳು. ಜಯಲಕ್ಷ್ಮಮ್ಮನವರು ಶ್ಯಾಮಸುಂದರನನ್ನು ಅಡಿಗೆಯ ಮನೆಯೊಳಗೆ ಕೂರಿಸಿಕೊಂಡು ಅವನಿಗೆ ಊಟ ಮಾಡಿಸಿದರೆ, "ಹೊರಗೆ ಕೂರಿಸಿ ಬಡಿಸಿದರೆ ನನ್ನ ದೃಷ್ಟಿ ತಾಕುತ್ತದೆಯೆ? ಈಗಲೇ ಹೀಗೆ ಮುಚ್ಚಟೆ ಮಾಡಿದರೆ ಅದು ಮುಂದೆ ಅಪ್ಪನ ದಾರಿ ಹಿಡಿದು ಹೋಗುತೆ" ಎಂದವಳು ಚುಚ್ಚುನುಡಿಯಾಡುತ್ತಿದ್ದಳು.

ರಾಮಮೂರ್ತಿ ಸರ್ಕಾರದ ಕೆಲಸಕ್ಕೆ ಸೇರಿದ್ದರೂ ಇನ್ನೂ ವೀರ ಖಾದಿಭಕ್ತನಾಗಿಯೇ ಉಳಿದಿದ್ದ. ಒಂದು ಸಲ ರಜದಲ್ಲಿ ಊರಿಗೆ ಬಂದಿದ್ದಾಗ, ಅವನು "ಭಾಗ್ಯಲಕ್ಷ್ಮಿಯ ಕೈಲಿ ಸ್ವಲ್ಪ ನೂಲುವುದನ್ನಾದರೂ ಹೇಳಿಸಿಕೊ. ಒಂದು ಚರಕ ತಂದು ಕೊಡುತ್ತೇನೆ. ವ್ಯರ್ಥ ಕಾಲಕ್ಷೇಪ ಮಾಡುವ ಬದಲು ನೂಲಬಹುದಲ್ಲ?" ಎಂದು ಹೆಂಡತಿಗೆ ಸದುದ್ದೇಶದಿಂದಲೇ ಹೇಳಿದ. "ನಾನೇನೂ ವ್ಯರ್ಥ ಕಾಲಕ್ಷೇಪ ಮಾಡುವುದಿಲ್ಲ. ಇಂಗ್ಲಿಷ್ ನಾವೆಲ್ ಓದುವುದಿಲ್ಲವೆ? ಅದಕ್ಕೇ ನನಗೆ ಹೊತ್ತು ಸಾಲದು. ಚರಕ ಗಿರಕ ಎಲ್ಲ ವಿಧವೆಯರಿಗೆ, ಗಂಡ ಬಿಟ್ಟವರಿಗೆ. ನನಗೆ ಯಾಕೆ?" ಎಂದು ಇಂದಿರೆ ನುಡಿದಳು. ಆ ದಿನ ಮನೆಯಲ್ಲಿ ರಾದ್ಧಾಂತ. ಅವಳ ಕೆನ್ನೆಗೆ ರಾಮಮೂರ್ತಿಯ ಪೆಟ್ಟು ಬಲವಾಗಿ ಬಿತ್ತು. ಅವಳ ಕೆನ್ನೆಗೆ ಅವನಿಂದ ಬಿದ್ದ ಪೆಟ್ಟಿಗಿಂತ ಅವಳ ಮಾತಿನಿಂದ ಭಾಗ್ಯಲಕ್ಷ್ಮಿಯ ಹೃದಯಕ್ಕೆ ಬಿದ್ದ ಪೆಟ್ಟು ಬಲವಾಗಿತ್ತು.

ಹೀಗೆಯೇ ಇನ್ನೂ ಹಲವಾರು ಸಣ್ಣಪುಟ್ಟ ಕಹಿ ಪ್ರಸಂಗಗಳು ನಿತ್ಯ ನಡೆಯುತ್ತಲೇ ಇದ್ದವು. ಈ ನಾದಿನಿಯೊಂದಿಗೆ ಹೀಗೆ ಬಾಳುವುದಕ್ಕಿಂತ ಮದರಾಸಿಗೇ ಹೋಗಿ, ಆದದ್ದಾಗಲಿ ಎಂದು ಆ ಸೂಳೆಯೊಂದಿಗೇ ಬಾಳುವುದು ಮೇಲಾದೀತೋ ಏನೋ ಎಂದು ಭಾಗ್ಯಲಕ್ಷ್ಮಿ ನೊಂದು ಆಲೋಚಿಸುತ್ತಿದ್ದಳು. ಇದೆಲ್ಲಾ ಅವಳ ತಾಯಿತಂದೆಗಳ ಗಮನಕ್ಕೂ ಬಾರದೆ ಇರಲಿಲ್ಲ. "ಬಿಸಿಯ ತುಪ್ಪ ನುಂಗಬಾರದು ಉಗುಳಬಾರದು" ಎಂಬ ಸ್ಥಿತಿಯಲ್ಲಿ ಅವರಿದ್ದರು.

ವೆಂಕಟೇಶಮೂರ್ತಿಗೆ ಹೆಣ್ಣಿನ ಮೇಲೆ ಹೆಣ್ಣು ಬರುತ್ತಿದ್ದಿತು. ಒಬ್ಬಳು ಸೊಸೆ ಇದ್ದೇ ಹೀಗೆ, ಇನ್ನು ಒಬ್ಬಳು ಸೊಸೆಯಾದರೆ ಭಾಗ್ಯ ಲಕ್ಷ್ಮಿಯೂ ಬದುಕುವಂತಿಲ್ಲ ತಾವೂ ಬದುಕುವಂತಿಲ್ಲ ಎಂದು ನಾರಾಯಣ ಮೂರ್ತಿಗಳು ಬಗೆದರು. ವೆಂಕಟೇಶಮೂರ್ತಿಯ ಮದುವೆಗೆ ಮೊದಲು ಭಾಗ್ಯಲಕ್ಷ್ಮಿಗೆ ಏನಾದರೂ ವ್ಯವಸ್ಥೆಯಾಗಬೇಕೆಂದು ಅವರು ನಿಶ್ಚಯಿಸಿದರು.

ನಾರಾಯಣಮೂರ್ತಿಗಳು ಹೇಗೂ ಭಾಗ್ಯಲಕ್ಷ್ಮಿಗೆ ಮೂರು ಎಕರೆ ಗದ್ದೆಯನ್ನೂ ಒಂದು ಮನೆಯನ್ನೂ ಬಳುವಳಿಯಾಗಿ ಕೊಡಬೇಕೆಂದು ಮಾಡಿಕೊಂಡಿದ್ದರಷ್ಟೆ. ಆದರೆ ಈಗಾಗಲೇ ಅವರು ಅಳಿಯನಿಗಾಗಿ ನಾಲ್ಕೈದು ಸಾವಿರ ಸುರಿದಿದ್ದರು. ಆದರೆ ಆ ವೆಚ್ಚದಿಂದ ಮಗಳಿಗೆ ಸುಖಸಾಧನೆಯಾಗುವ ಬದಲು ದುಃಖವೇ ಸಮನಿಸಿತ್ತು. ಈಗ ಅವಳ ನೆಮ್ಮದಿಗಾಗಿ ತಾವು ಏನಾದರೂ ಮಾಡಲೇಬೇಕಾದ್ದು ತಮ್ಮ ಕರ್ತವ್ಯವೆಂದು ಅವರು ಭಾವಿಸಿ, ಅದಕ್ಕೆ ಇದೇ ಸಕಾಲವೆಂದು ಎಣಿಸಿದರು.

ನಾರಾಯಣಮೂರ್ತಿಗಳಿದ್ದ ಬೀದಿಯಲ್ಲಿಯೇ ಒಂದು ಮನೆ ಭೋಗ್ಯಕ್ಕೆ ಸಿಕ್ಕುವಹಾಗಿತ್ತು. ಅವರು ಪ್ರಯತ್ನಪಟ್ಟು ಆ ಮನೆಯ ಭೋಗ್ಯವನ್ನು ಮಾಡಿಕೊಂಡು, ಭೋಗ್ಯಪತ್ರವನ್ನು ಭಾಗ್ಯಲಕ್ಷ್ಮಿಯ ಹೆಸರಿನಲ್ಲಿಯೇ ಬರೆಸಿದರು. ಮೈಸೂರಿಗೆ ಸಮೀಪದಲ್ಲಿ ನಾಗನಹಳ್ಳಿಯ ಬಳಿ ಮೂರು ಎಕರೆ ಗದ್ದೆ ಕೊಂಡು ಭಾಗ್ಯಲಕ್ಷ್ಮಿಯ ಹೆಸರಿನಲ್ಲಿಯೇ ಕ್ರಯಪತ್ರ ಮಾಡಿದರು. ಒಂದು ಒಳ್ಳೆಯ ದಿನ ಗೊತ್ತುಮಾಡಿ, ಭೋಗ್ಯಕ್ಕೆ ಪಡೆದ ಮನೆಯಲ್ಲಿ ಭಾಗ್ಯಲಕ್ಷ್ಮಿ ಸಂಸಾರ ಹೂಡುವಂತೆ ಏರ್ಪಾಡು ಮಾಡಿದರು.

ಶಾಮಣ್ಣ ತನ್ನ ಅಂಗಡಿಗೆ ಬಂಡವಾಳ ಸಾಲದೆಂದು ಎಂದೋ ಒಂದು ದಿನ ಅವರ ಮುಂದೆ ಗೊಣಗಿದ್ದ. ಅದನ್ನು ನೆನೆದು, ಅವನಿಗೆ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟು, ಆ ಸಂಬಂಧದ ಲಾಭವನ್ನು ಭಾಗ್ಯಲಕ್ಷ್ಮಿಗೆ ಕೊಡುವಂತೆ ವ್ಯವಸ್ಥೆ ಮಾಡಿದರು. ನಾರಾಯಣಮೂರ್ತಿಗಳ ಮನೆಯವರಿಗೂ ಶಾಮಣ್ಣನಿಗೂ ಉಂಟಾಗಿದ್ದ ಋಣಾನುಬಂಧ ಇದರಿಂದ ಬಲಗೊಂಡಂತಾಯಿತು.

ಈ ವ್ಯವಸ್ಥೆಯೆಲ್ಲ ಮುಗಿದ ಮೇಲೆ, ವೆಂಕಟೇಶನ ಮದುವೆ ನಡೆಯಿತು. ರಾಮಮೂರ್ತಿಯ ಮದುವೆಗೆ ನಾನು ಹೋಗಲಾಗಿರಲಿಲ್ಲ; ಈ ಮದುವೆಗೆ ಹೋಗಿದ್ದೆ. ರಾಮಮೂರ್ತಿಯ ಮದುವೆಯಲ್ಲೇ "ನಿಮ್ಮ ಅಳಿಯ ಎಲ್ಲಿ, ಕಾಣುವುದೇ ಇಲ್ಲ? ಯಾಕೆ ಬರಲಿಲ್ಲ?" ಎಂದು ಮುಂತಾಗಿ ಬೀಗರು ನಾರಾಯಣಮೂರ್ತಿಗಳನ್ನೂ ಜಯಲಕ್ಷ್ಮಮ್ಮನವರನ್ನೂ ಪ್ರಶ್ನಿಸಿದ್ದರು. ಆಗ ಎತ್ತಿ ಆಡುವುದಕ್ಕೆ ಸೊಸೆ ಇರಲಿಲ್ಲ. ಅವರು ಏನೋ ಮಾತು ತೇಲಿಸಿ ಸಮಾಧಾನವಾಗುವಂತೆ ಉತ್ತರ ಕೊಟ್ಟಿದ್ದರು. ಈ ಸಲ ಮದುವೆಯ ಮನೆಯಲ್ಲಿ ಮತ್ತೆ ಈ ಮಾತು ಬಂದಿತು. "ಎಲ್ಲೋ ದೂರದಲ್ಲಿ ಕೆಲಸ, ಬರಲಾಗಲಿಲ್ಲ" ಎಂದು ಜಯಲಕ್ಷ್ಮಮ್ಮನವರು ಮಾತು ಹಾರಿಸಿದರು. ಇಂದಿರೆ ಯಾವುದೋ ಸಂದರ್ಭದಲ್ಲಿ ರಹಸ್ಯವಾಗಿಯೇ ರಹಸ್ಯವನ್ನು ಹೊರಕ್ಕೆ ಹಾಕಿ, ಇವರ ಮಾನವನ್ನು ಹಾರಿಸಿದಳು; ದಂಪತಿಪೂಜೆಗೆ ಭಾಗ್ಯಲಕ್ಷ್ಮಿ ಯನ್ನು ಬಲಾತ್ಕಾರವಾಗಿ ನಿಲ್ಲಿಸುವ ಹಾಗೆ ಮಾಡಿ, ಅವಳು ಮುಖ ತಗ್ಗಿಸುವ ಹಾಗೆ ಮಾಡಿದಳು.

ಶಾಮಣ್ಣ ತಾನು ಮದುವೆಯೇ ಆಗುವುದಿಲ್ಲವೆಂದು ಶಪಥಮಾಡಿದ್ದ. ನನ್ನ ಮತ್ತು ನಾರಾಯಣಮೂರ್ತಿಗಳ ಬಲವಂತಕ್ಕೆ ತನ್ನ ಶಪಥವನ್ನು ಮುರಿದು ಅವನೂ ಕಡೆಗೆ ಮದುವೆಯಾದ.

## ೨೭

## ಹತ್ತು ವರ್ಷದ ಹಂಬಲು ಹಣ್ಣಾಗದಿದ್ದೀತೆ?

ನಾರಾಯಣಮೂರ್ತಿಗಳ ಆಸ್ತಿ ಪಿತ್ರಾರ್ಜಿತವಲ್ಲ; ಹೆಂಡತಿಯ ಕಡೆಯಿಂದ ಬಂದದ್ದು. ಅದನ್ನವರು ಬಹಳ ಬುದ್ಧಿವಂತಿಕೆಯಿಂದ ರೂಢಿಸಿ ಕೊಂಡು ಬಂದಿದ್ದರು. ಜೊತೆಗೆ ತಮ್ಮ ಸ್ವಂತ ಗಳಿಕೆಯನ್ನು ಅದಕ್ಕೆ ಕೂಡಿಸಿದ್ದರು. ಆದ್ದರಿಂದ, ತಮ್ಮ ಆದಾಯದ ವಿನಿಯೋಗದ ಬಗ್ಗೆ ಅವರು ಯಾರಿಗೂ ಉತ್ತರವಾದಿಗಳಾಗಿರಲಿಲ್ಲ. ಸೊಸೆಯರ ಗೊಣಗಾಟ ವನ್ನು ಕಿವುಡುಗೇಳಿ, ಅವರು ದುಃಸ್ಥಿತಿಗೆ ಸಿಲುಕಿದ್ದ ತಮ್ಮ ಒಬ್ಬಳೇ ಮಗಳನ್ನು ಸಾಧ್ಯವಿರುವಮಟ್ಟಿಗೂ ಸರ್ವವಿಧದಲ್ಲಿಯೂ ಸುಖಿಯನ್ನಾಗಿ

ಮಾಡಲು ಹೆಣಗುತ್ತಿದ್ದರು. ಇದಕ್ಕಾಗಿ ಎಷ್ಟು ಹಣವನ್ನು ವ್ಯಯ ಮಾಡುವುದಕ್ಕೂ ಅವರು ಹಿಂದೆಮುಂದೆ ನೋಡುತ್ತಿರಲಿಲ್ಲ

ಆದರೂ, ಭಾಗ್ಯಲಕ್ಷ್ಮಿ ತನ್ನ ನಿಮಿತ್ತದಿಂದ ತನ್ನ ತಂದೆಗೆ ಅನಾವಶ್ಯಕ ವಾಗಿ ವೆಚ್ಚವಾಗದಂತೆ ಬಾಳು ನಡಸುತ್ತಿದ್ದಳು. ಶಾಮಣ್ಣ ಅವಳಿಗೆ ಒದಗಿಸುತ್ತಿದ್ದ ಅಲ್ಪಸ್ವಲ್ಪ ಗಾಂಧಿ ಸಾಹಿತ್ಯ ಅವಳ ಬಾಳಿನಮೇಲೆ ಅಗಾಧ ವಾದ ಪರಿಣಾಮವನ್ನುಂಟುಮಾಡಿತ್ತು. ಅವಳು ನಿತ್ಯವೂ ಕನ್ನಡ ರಾಮಾಯಣ ಮಹಾಭಾರತಗಳಿಂದ ಸ್ವಲ್ಪ ಸ್ವಲ್ಪ ಭಾಗವನ್ನಾದರೂ ಓದದೆಇರುತ್ತಿರಲಿಲ್ಲ; ಭಗವದ್ಗೀತೆಯನ್ನು ಓದಿ ಅರ್ಥಮಾಡಿಕೊಳ್ಳಲು ಪ್ರಯತ್ನಪಡುತ್ತಿದ್ದಳು.

ಹೈಸ್ಕೂಲು ತರಗತಿಯಲ್ಲಿ ಓದುತ್ತಿದ್ದ ಅನಾಥ ಬಾಲಕನೊಬ್ಬನು ನಾರಾಯಣಮೂರ್ತಿಗಳ ಮನೆಯಲ್ಲಿ ಓದಿಕೊಂಡಿದ್ದ. ನಾರಾಯಣ ಮೂರ್ತಿಗಳು ಶ್ಯಾಮಸುಂದರನಿಗೆ ಬಾಲಬೋಧೆ ಕಲಿಸುವುದಕ್ಕೆ ಅವನನ್ನು ಗೊತ್ತುಮಾಡಿದ್ದರು. ಭಾಗ್ಯಲಕ್ಷ್ಮಿ ಯಾರಿಗೂ ತಿಳಿಯದಂತೆ ಅವನಿಂದ ಅಲ್ಪಸ್ವಲ್ಪ ಇಂಗ್ಲಿಷನ್ನೂ ಕಲಿಯಲು ಮೊದಲು ಮಾಡಿದ್ದಳು.

ಮೈಸೂರು ಟ್ರೇನಿಂಗ್ ಕಾಲೇಜಿನಲ್ಲಿ ಪಂಡಿತ ಪರೀಕ್ಷೆಗೆ ಓದುತ್ತಿದ್ದ ಸುಬ್ಬರಾಯಶಾಸ್ತ್ರಿ ಎಂಬ ವಿದ್ಯಾರ್ಥಿಗೆ ನಾರಾಯಣಮೂರ್ತಿಗಳು ತಮ್ಮ ಮನೆಯಲ್ಲಿ ಎರಡು ವಾರಗಳನ್ನು ಕೊಟ್ಟಿದ್ದರು. ಆತನ ಸಹಾಯದಿಂದ ಭಾಗ್ಯಲಕ್ಷ್ಮಿ ಹಳಗನ್ನಡ ಕಾವ್ಯಗಳು ಕೆಲವನ್ನು ವ್ಯಾಸಂಗಮಾಡತೊಡಗಿ ದಳು. ಅಲ್ಲದೆ, ಆತನ ಕಾಲೇಜಿನ ಪುಸ್ತಕಭಂಡಾರದಿಂದ ಕನ್ನಡ ಕಾದಂಬರಿ ಕಥೆಗಳನ್ನು ತರಿಸಿ ಓದುತ್ತಿದ್ದಳು. ಈ ಸಂದರ್ಭದಲ್ಲಿ ಅವಳು ವೆಂಕಟಾ ಚಾರ್ಯರ ಮತ್ತು ಗಳಗನಾಥರ ಕಾದಂಬರಿಗಳಲ್ಲಿ ದೊರೆತವೆಲ್ಲವನ್ನೂ ಓದಿ ಮುಗಿಸಿದಳು; ಅವುಗಳಲ್ಲಿ, ಹಿಂದೆಯೇ ಅವಳ ಮನಸೆಳೆದಿದ್ದ ನಾಲ್ಕೈದು ಕಾದಂಬರಿಗಳನ್ನು ಹಲಾವರು ಸಲ ಓದಿದಳು. ಅವಳ ಈ ಓದಿನ ಹುಚ್ಚು ಶಾಮಣ್ಣನಿಂದ ನನಗೆ ತಿಳಿದಾಗ ನನ್ನಲ್ಲಿದ್ದ ಹಲವಾರು ಕನ್ನಡ ಪುಸ್ತಕಗಳನ್ನು ಅವಳಿಗಾಗಿ ನಾನು ಕಳಿಸಿಕೊಟ್ಟೆ. ನಾನು ಕಳಿಸಿಕೊಟ್ಟವು, ಕನ್ನಡ ಸಾಹಿತ್ಯದ ನವೋದಯದ ಕೆಲವು ಕಿರಣಗಳು: ಶ್ರೀನಿವಾಸರ ಕತೆಗಳು, ಪುಟ್ಟಪ್ಪ ಮತ್ತು ಬೇಂದ್ರೆಯವರ ಒಂದೆರಡು ಕವನ ಸಂಗ್ರಹಗಳು. ಹೀಗಾಗಿ,

ಬೆಳೆಯುತ್ತಿರುವ ಆಧುನಿಕ ಕನ್ನಡ ಸಾಹಿತ್ಯದಲ್ಲಿಯೂ ಅವಳ ಆಸಕ್ತಿ ಹೆಚ್ಚಿ, ಶಾಮಣ್ಣನಿಂದ ಹೊಸಗನ್ನಡ ಗ್ರಂಥಗಳನ್ನು ಕೊಂಡುತರಿಸಿ ಓದ ತೊಡಗಿದಳು.

ಭಾಗ್ಯಲಕ್ಷ್ಮಿಯ ಕಂಠ ಬಹು ಮಧುರವಾಗಿತ್ತು. ಚಿಕ್ಕಂದಿನಲ್ಲಿ ಅವರಿವರು ಹಾಡುವುದನ್ನು ಕೇಳಿಯೇ ಹಲವು ಹಾಡುಗಳನ್ನು ಕಲಿತು ಹಾಡುತ್ತಿದ್ದಳು. ಅವಳು ಮದುವೆಯಾದ ಕಾಲದಲ್ಲಿ, ಮದುವೆಯಾಗುವ ಹೆಣ್ಣುಮಕ್ಕಳಿಗೆ ಈಗಿನಂತೆ ಅವಶ್ಯವಾಗಿ ಸಂಗೀತ ಶಿಕ್ಷಣ ಕೊಡುತ್ತಿರಲಿಲ್ಲ. ಆದ್ದರಿಂದ, ಅವಳಿಗೆ ಸಂಗೀತ ಪಾಠವೇನಾಗಿರಲಿಲ್ಲ. ಮದುವೆಯ ಕಾಲದಲ್ಲಿ ಅವಳು ಲಜ್ಜೆಯಿಂದ ಹಾಡಿದ ಒಂದೆರಡು ಹಳೆಯ ಕಾಲದ ಹಾಡುಗಳೇ ಕೇಳಲು ಬಲು ಹಿತವಾಗಿದ್ದುವು. ಈಗ ಒಬ್ಬೊಂಟಿಗಳಾಗಿದ್ದ ಭಾಗ್ಯಲಕ್ಷ್ಮಿ ಬೇಸರವಾದಾಗ ತನಗೆ ತಾನೇ ಮರೆತ ಹಾಡುಗಳನ್ನು ನೆನೆದು 'ಕರುಕು' ತ್ತಿದ್ದಳು. ಒಂದು ದಿನ ಸುಬ್ಬರಾಯಶಾಸ್ತ್ರಿ ಮನೆಯೊಳಕ್ಕೆ ಪ್ರವೇಶ ಮಾಡಿದಾಗ ಅವನು ಬಂದುದನ್ನೂ ಗಮನಿಸದೆ ಹಾಡುವುದರಲ್ಲಿ ಮುಳುಗಿ ದ್ದಳು. ಅವನು ಬಂದನೆಂಬುದನ್ನು ಅರಿತಕೂಡಲೆ ಹಾಡು ನಿಲ್ಲಿಸಿ, ತಲೆತಗ್ಗಿ ಸಿದಳು. ಸುಬ್ಬರಾಯಶಾಸ್ತ್ರಿ ರುದ್ರಪಟ್ಟಣದವನು; ಎಂದಮೇಲೆ, ತಕ್ಕಮಟ್ಟಿಗೆ ಸಂಗೀತಾಭ್ಯಾಸಮಾಡಿದ್ದನೆಂದು ಬೇರೆ ಹೇಳಲೇಬೇಕಾಗಿಲ್ಲ. ಭಾಗ್ಯಲಕ್ಷ್ಮಿಯ ಸಹಜ ಮಧುರವಾದ ಹಾಡಿಕೆಯನ್ನು ಅಕಸ್ಮಾತ್ತಾಗಿ ಕೇಳಿದ ಅವನು, "ತಾಯಿ, ನೀವು ಹೇಗೂ ನನ್ನಿಂದ ಕಾವ್ಯಗಳ ಅರ್ಥ ಹೇಳಿಸಿಕೊಳ್ಳುತ್ತೀರಿ. ನೀವು ಒಪ್ಪುವುದಾದರೆ, ಕಾವ್ಯಗಳನ್ನು ರಾಗವಾಗಿ ಓದುವುದನ್ನು ಹೇಳಿ ಕೊಡುತ್ತೇನೆ. ಹಾಗೆಯೇ ಕೆಲವು ದಾಸರ ಪದಗಳನ್ನೂ ಹಾಡುವುದನ್ನು ಕಲಿಯಬಹುದು. ತ್ಯಾಗರಾಜರ ಕೃತಿಗಳನ್ನು ಕಲಿಯಬೇಕಾದರೆ ಕಷ್ಟ. ಇವು ಅಷ್ಟು ಕಷ್ಟವಾಗುವುದಿಲ್ಲ. ನಮ್ಮನ್ನು ನಾವು ಮರೆಯಲು ಸಂಗೀತ ಸಾಹಿತ್ಯ ಗಳಿಗಿಂತ ಉತ್ತಮ ಸಾಧನ ಉಂಟೆ? ನೀವು ಸಂಕೋಚ ಪಡಬೇಕಾದ್ದಿಲ್ಲ. ಇಷ್ಟರಮೇಲೆ ನಿಮ್ಮ ಇಷ್ಟ" ಎಂದು ಸೂಚಿಸಿದನು. ಭಾಗ್ಯಲಕ್ಷ್ಮಿ ತನ್ನ ದುಃಖವನ್ನು ಮರೆಯಲು ಪಡುತ್ತಿದ್ದ ಸಾಹಸವನ್ನು ಅವನು ಅರಿತವನಾಗಿ ದ್ದನು. ಆದ್ದರಿಂದಲೆ, ಅವನು ಸಹಾನುಭೂತಿಯಿಂದ ಈ ಸಲಹೆಯನ್ನು

ಮಾಡಿದನು. ಭಾಗ್ಯಲಕ್ಷ್ಮಿ ತನ್ನ ತಂದೆಯ ಅನುಮತಿ ಕೇಳಿದಳು. ಅವರು, "ಸಂಗೀತ ಕಲಿಯುವುದು ಪಾಪವಲ್ಲ. ನೀನು ಎಲ್ಲರಂತೆ ಇದ್ದಿದ್ದರೆ ಅದರ ಮಾತು ಬೇರೆ. ಈಗ ನಿನ್ನ ಬಾಳು ಬರಿದಾಗಿದೆ. ಅದನ್ನು ತುಂಬಿಕೊಳ್ಳುವುದಕ್ಕೆ ಏನು ಬೇಕಾದರೂ ಮಾಡಮ್ಮ" ಎಂದು ಒಪ್ಪಿಗೆ ಕೊಟ್ಟರು. ಆದರೂ ಭಾಗ್ಯಲಕ್ಷ್ಮಿಗೆ ಇಷ್ಟವಿಲ್ಲ. ತನ್ನ ಸಂದೇಹವನ್ನು ತಂದೆಯ ಮುಂದಿಟ್ಟಳು. ಅವಳ ಓದು ಮುಂತಾದುವು ಹೊರಕ್ಕೆ ಪ್ರಕಟವಾಗದೆ ಗುಪ್ತವಾಗಿ ಸಾಗುತ್ತಿತ್ತು; ಸಂಗೀತವಾದರೆ ಪ್ರಕಟವಾಗತಕ್ಕದ್ದು; ಬೀದಿಯ ಜನ ಆಡಿಕೊಳ್ಳಬಹುದು. ಇದೇ ಅವಳ ಸಂದೇಹ. ನಾರಾಯಣಮೂರ್ತಿಗಳು, "ಜನಕ್ಕೆ ಹೆದರಿ, ಮನಸ್ಸಿಗೆನೆಮ್ಮದಿ ತರುವ ದೋಷವಲ್ಲದ ಕಾರ್ಯಗಳನ್ನು ಬಿಡುವುದಕ್ಕಾಗುತ್ತದೆಯೇ ? ನೀನು ಹೆದರಬೇಡ ಸುಬ್ಬರಾಯಶಾಸ್ತ್ರಿ ಸಂತೋಷವಾಗಿ ಹೇಳಿಕೊಡುತ್ತೇನೆಂದು ಮುಂದೆ ಬಂದಿರುವಾಗ ಕಲಿಯುವುದರಲ್ಲಿ ನನಗೇನೂ ದೋಷ ಕಾಣಿಸದು" ಎಂದು ಭರವಸೆಯ ಮಾತುಗಳನ್ನಾಡಿದ ಮೇಲೆ ಭಾಗ್ಯಲಕ್ಷ್ಮಿ ಒಪ್ಪಿಕೊಂಡಳು.

ಹೀಗೆ, ಮನೆಗೆಲಸ, ಸಾಹಿತ್ಯವಾಚನ, ಸಂಗೀತಾಭ್ಯಾಸ, ಚರಕದಲ್ಲಿ ನೂಲು ತೆಗೆಯುವುದು—ಇವು ಅವಳಿಗೆ ದಿನಪೂರ್ತಿಯ ಕೆಲಸವನ್ನೊದಗಿಸಿದ್ದುವು. ಕ್ರಮಕ್ರಮವಾಗಿ, ಅವಳು ತನ್ನ ದುಃಖವನ್ನು ಮರೆಯಲಾಗದಿದ್ದರೂ ಸಹಿಸಿಕೊಳ್ಳಲು ಸಮರ್ಥಳಾಗತೊಡಗಿದಳು; ಅವಳ ಕೃಶವಾಗಿದ್ದ ದೇಹ ತುಂಬಿಕೊಳ್ಳತೊಡಗಿತು; ಮುಖದಲ್ಲಿ ಹೊಸ ತೇಜಸ್ಸು ಸ್ಫುರಿಸಿತು, ಕಣ್ಣಿನಲ್ಲಿ ಹೊಸ ಮಿಂಚು ಮಿನುಗತೊಡಗಿತು ಅವಳ ಆತ್ಮ ಅರಳುತ್ತಿತ್ತು, ಶಕ್ತಿಗೂಡಿಕೊಳ್ಳುತ್ತಿತ್ತು. ಮಾರೀಚಾಶ್ರಮದಲ್ಲಿ ಶಕುಂತಳೆಯಂತೆ ಇವಳೂ ಒಂದು ಬಗೆಯ ತಪಸ್ಸನ್ನಾಚರಿಸುತ್ತಿದ್ದಳು. ಅವಳ ಆಹಾರ ವಿಹಾರಗಳಲ್ಲಿ, ನಡೆನುಡಿಗಳಲ್ಲಿ, ಈ ತಪೋಜೀವನ ಸ್ಪಷ್ಟವಾಗಿ ಕಾಣುತ್ತಿತ್ತು. ಅವಳ ಸರಳ ಜೀವನದಲ್ಲಿ ಕಠಿನತೆಯೂ ಇತ್ತು, ಕೋಮಲತೆಯೂ ಇತ್ತು. ಇಂಥ ತಾಯ ಮಡಿಲಿನಲ್ಲಿ ಬೆಳಯುವ ಭಾಗ್ಯ ಶ್ಯಾಮಸುಂದರನ ಪಾಲಿಗೆ ಬಂದಿತು. ದುಃಖಪೂತವಾದ ಮಾತೃಪ್ರೇಮಕ್ಕೆ ಅವನು ಸರ್ವಾಧಿಕಾರಿಯಾಗಿದ್ದನು.

ಭಾಗ್ಯಲಕ್ಷ್ಮಿಗೆ ಈಗ ಶ್ಯಾಮಸುಂದರನೇ ಸರ್ವ ಸಂಪತ್ತಾಗಿದ್ದನು. ಸತ್ತ್ವಶಾಲಿನಿಯ ಪ್ರೇಮಪುತ್ರ ಸಾತ್ತ್ವಿಕ ಪ್ರಭೆಯಿಂದ ಕಂಗೊಳಿಸುತ್ತಿದ್ದನು. ಅವನ ಮುದ್ದು ಮೊಗದ ಸೊಬಗು, ಅವನ ಮೃದುನುಡಿಗಳಲ್ಲಿ ತುಳುಕುತ್ತಿದ್ದ ಸವಿ, ಆಟಪಾಟಗಳಲ್ಲಿ ಕಂಡುಬರುತ್ತಿದ್ದ ನಯ, ಓದಿನಲ್ಲಿ ತೋರುತ್ತಿದ್ದ ಆಸಕ್ತಿ, ಬುದ್ಧಿಯ ಚುರುಕು—ಇವನ್ನು ಕಂಡು, ಸವಿದು, ನಲಿದು, ಸಾಹಿತ್ಯ ಸಂಗೀತಗಳಿಂದಲೂ ಪಡೆಯಲಾಗದಿದ್ದ ಅಪಾರಾನಂದವನ್ನು ಅವಳು ಪಡೆಯುತ್ತಿದ್ದಳು. ಈ ಆನಂದಾಮೃತಕ್ಕೆ ಒಂದು ಸಂಗತಿ ಮಾತ್ರ ಆಗಾಗ್ಗೆ ಹುಳಿ ಹಿಂಡುತ್ತಿತ್ತು.

ಶ್ಯಾಮಸುಂದರ ತನ್ನ ಜೊತೆಯ ಹುಡುಗರೊಂದಿಗೆ ತನ್ನ ಮನೆಯ ವಿಚಾರ ಹೇಳಿಕೊಳ್ಳುವಾಗಲೆಲ್ಲ 'ನಮ್ಮ ಅಜ್ಜ, ನಮ್ಮ ಅಮ್ಮ' ಎಂದು ಹೇಳಿಕೊಳ್ಳುತ್ತಿದ್ದನು. ಕೆಲವರು ಬೆಳೆದ ಹುಡುಗರು ಸಹಜವಾಗಿ, 'ನಿಮ್ಮ ಅಪ್ಪ ಯಾರೋ?' ಎಂದು ಕೇಳಿಬಿಡುತ್ತಿದ್ದರು. ಅವನು ಹೀಗೆಂದು ಕೇಳಿದರೆಂದು ತನ್ನ ತಾಯಿಗೆ ಹೇಳಿ, 'ಅಪ್ಪ ಎಲ್ಲಮ್ಮ' ಎಂದು ಕೇಳಿಬಿಡುತ್ತಿದ್ದನು. ಭಾಗ್ಯಲಕ್ಷ್ಮಿ ಏನು ಹೇಳಬೇಕು? ದಿಟ ನುಡಿಯಲೊಲ್ಲದೆ, ಸುಳ್ಳು ಹೇಳಲು ಇಷ್ಟಪಡದೆ, ಮಗನ ಮಾತನ್ನು ಬೇರೆಯ ಕಡೆಗೆ ತಿರುಗಿಸಿಬಿಡುತ್ತಿದ್ದಳು. ತನ್ನ ಮಗನ ಬಾಳು ಹೀಗಾಯಿತೆ ಎಂದು ಕುದ್ದುಕೊಳ್ಳುತ್ತಿದ್ದಳು.

ಬೀದಿಯಲ್ಲಿನ ನೆರೆಹೊರೆಯ ಕುತ್ಸಿತ ಬುದ್ಧಿಯ ಕೆಲವರು ಹೆಂಗಸರ ಬಿರುನುಡಿಗಳನ್ನೂ ಕೇಳುವ ದೌರ್ಭಾಗ್ಯ ಭಾಗ್ಯಲಕ್ಷ್ಮಿಯದಾಯಿತು. ಶಾಮಣ್ಣ ಅವಳ ಮನೆಗೆ ಆಗಾಗ್ಗೆ ಹೋಗುತ್ತಿದ್ದನಷ್ಟೆ. ಅವನಿಗೂ ಅವಳಿಗೂ ದುಷ್ಟಸಂಬಂಧವನ್ನು ಕಲ್ಪಿಸಿದರು ಕೆಲವರು. "ಗಂಡ ಬಿಟ್ಟಿದ್ದರೂ ಇವಳ ಸುಮಾನ ನೋಡಿ" ಎಂದು ಆಡಿಕೊಂಡರು ಒಬ್ಬಿಬ್ಬರು. "ಅಲ್ಲ, ಮೊದಲು ಹೇಗೆ ಜಿರಲೆಯ ಹಾಗಿದ್ದಳು! ಈಗ ಮೈ ಕೈ ತುಂಬಿಕೊಂಡು ಹೇಗೆ ಇದಾಳೆ! ಮೊದಲಿನ ಭಾಗ್ಯಲಕ್ಷ್ಮಿಯೇ ಅಲ್ಲ ಎನ್ನುವ ಹಾಗಿದಾಳೆ. ಗುರುತೇ ಸಿಕ್ಕುವುದಿಲ್ಲ ಈ ಖಾದಿ ಗೀದಿ ಎಲ್ಲ ಬರಿ ಬೂಟಾಟಿಕೆ ಅಂದ್ರೆ. ತೋಟ ಶೃಂಗಾರ ಒಳಗೆ ಗೋಣಿಸೊಪ್ಪು ಎಂದ ಹಾಗೆ. ಗಂಡ ಬಿಟ್ಟ ಇವಳಿಗೆ ಸಂಗೀತ ಯಾಕೆ ಅಂದ್ರೆ?" ಎಂದು

ಒಬ್ಬಾಕೆ ಎತ್ತಿದ ಪಲ್ಲವಿಗೆ, "ಗಂಡ ಬಿಟ್ಟ ಗರತಿಯರ ಪಾಡೇ ಹೀಗೆ ಅಂದ್ರೆ. ಗಂಡ ಬಿಟ್ಟಮೇಲೆ ಕೊಂಡಷ್ಟೇ ಲಾಭ ಅಂತ ಅವರಿವರ ಮನೆ ಹಾಳು ಮಾಡುವುದಕ್ಕೆ ತಯಾರಾಗಬೇಕಲ್ಲ. ಅವರಪ್ಪನ ಸಹಾಯ ಎಷ್ಟು ದಿನ ನಡೆಯುತ್ತೆ?" ಎಂದು ಇನ್ನೊಬ್ಬಾಕೆ ಅನುಪಲ್ಲವಿ ಕೂಡಿಸುತ್ತಿದ್ದಳು. ಇದೇ ತೆರನ ಕೇಳಲಾಗದ ನುಡಿಗಳು ಹಲವು ಬಾಯಿಂದ ಬಾಯಿಗೆ ಹಬ್ಬಿ ಭಾಗ್ಯಲಕ್ಷ್ಮಿಯ ಕಿವಿಯನ್ನು ಮನೆಗೆಲಸದವಳ ಮೂಲಕ ಮುಟ್ಟುತ್ತಿದ್ದುವು. ಭಾಗ್ಯಲಕ್ಷ್ಮಿ ಇದರಿಂದ ದುಃಖಿತಳಾದರೂ ಧೈರ್ಯಗೆಡಲಿಲ್ಲ, ಶಾಂತಿಯನ್ನು ಕಳೆದುಕೊಳ್ಳಲಿಲ್ಲ.

ಹೀಗೆ ಹತ್ತು ವರ್ಷಕಾಲ ಸಾಗಿತು ಅವಳ ಬದುಕು. ಅವಳ ಸಾಧನೆ ಅವಳಿಗೆ ಸ್ಥಿರಸಂಕಲ್ಪವನ್ನು ಕೊಟ್ಟಿತ್ತು; ಅವಳ ದೈವಭಕ್ತಿ ಅವಳಿಗೆ ಶ್ರದ್ಧೆಯನ್ನು ನೀಡಿತ್ತು; ಕಾವ್ಯ ಸಂಗೀತ ವಿಹಾರ ಬಾಳಿನಲ್ಲಿ ಉತ್ತೇಜನ ವನ್ನು ತುಂಬಿತ್ತು ತನ್ನ ಆತ್ಮಶಕ್ತಿಯಿಂದಲೇ ಪತಿಯನ್ನು ತನ್ನ ಕಡೆಗೆ ಸೆಳೆದುಕೊಳ್ಳುವೆನೆಂಬ ಬಲಿಷ್ಠವಾದ ನಿರೀಕ್ಷೆಯನ್ನು ಹೊಂದಿದ್ದಳವಳು.

ಅವಳು ದಿನಗಳನ್ನು ಎಣಿಸುತ್ತಿದ್ದಳು.

ಬೀದಿಯ ಕೆಲವರೂ ದಿನಗಳನ್ನು ಎಣಿಸುತ್ತಿದ್ದರು: "ಇನ್ನೆರಡು ವರ್ಷವಾದರೆ ಭಾಗ್ಯಲಕ್ಷ್ಮಿ ವಿಧವೆಗೆ ಸಮಾನ" ಎಂದು.

ಆದರೆ, ದೈವದ ಎಣಿಕೆ ಬಲ್ಲವರು ಯಾರು? ಅವಳ ಹತ್ತು ವರ್ಷದ ಹಂಬಲು ಹಣ್ಣಾಗದಿದ್ದೀತೆ? ಹೇಗೆ ಎನ್ನುವ ಎಣಿಕೆಯಲ್ಲಿತ್ತು ಅವಳ ನಿಶ್ಚಲಮನಸ್ಸು.

## ೨೮
## ಕನಸಿನ ಕೆಳದಿಗಾಗಿ ಕಾದಿದ್ದ

ಮೇಲಿನ ಕಾಲಾವಧಿಯಲ್ಲಿ ಕೃಷ್ಣಸ್ವಾಮಿಯ ಬದುಕು ಮದರಾಸಿನಲ್ಲಿ ಹೇಗೋ ಸಾಗುತ್ತಿತ್ತು ಎಂಬ ಸಂಗತಿಯನ್ನು ಸ್ಥೂಲವಾಗಿ ಮಾತ್ರ ನಾನು ಬಲ್ಲೆ. ಶಾಮಣ್ಣ ಮೈಸೂರು, ಬೆಂಗಳೂರು, ಮದರಾಸುಗಳಿಗೆ ಹಾಸು ಹೊಕ್ಕಾಗಿ ಹರಿದಾಡುತ್ತಿದ್ದನೆಂದು ಮೊದಲೇ ಸೂಚಿಸಿರುವೆನಷ್ಟೆ. ಕೃಷ್ಣ ಸ್ವಾಮಿ ಅತಿಯಾಗಿ ಸಿಗರೇಟ್ ಸೇದುತ್ತಾನೆ, ಕೆಟ್ಟ ಹೆಂಗಸರ

ಸಹವಾಸ ಮಾಡಿದ್ದಾನೆ—ಇಷ್ಟು ಹೊರತು, ಅವನು ಮೊದಲಿನ ಕೃಷ್ಣ ಸ್ವಾಮಿಯೇ ಎಂದು ಅವನ ಅಭಿಪ್ರಾಯ. "ಕುಡಿತವೊಂದನ್ನು ಕಲಿತಿದ್ದರೆ, ಇದು ಮೂರು ಹೊರತು ಅವನು ಮೊದಲಿನ ಕೃಷ್ಣಸ್ವಾಮಿಯೇ ಎಂದು ಹೇಳುತ್ತಿದ್ದೆಯೇನೋ" ಎಂದು ಅವನು ಮಾತಿಗೆ ನಾನು ನಗುತ್ತಿದ್ದೆ.

ಶಾಮಣ್ಣ ಮದರಾಸಿಗೆ ಹೋದಾಗಲೆಲ್ಲ ಕೃಷ್ಣಸ್ವಾಮಿಯನ್ನು ನೋಡದೆ ಬರುತ್ತಿರಲಿಲ್ಲ. ಅವನ ದಾರಿಗೆ ಅವನನ್ನು ಬಿಟ್ಟ ರೀತಿಯಲ್ಲಿಯೇ ಶಾಮಣ್ಣ ವರ್ತಿಸುತ್ತಿದ್ದುದರಿಂದ, ಶಾಮಣ್ಣನನ್ನು ಕಂಡರೆ ಕೃಷ್ಣಸ್ವಾಮಿಗೆ ತುಂಬ ಆದರ. ಶಾಮಣ್ಣ ಹೋಟಲಿನಲ್ಲಿ ಇಳಿದುಕೊಂಡರೆ ಆಕ್ಷೇಪಿಸುತ್ತಿದ್ದ. ಆದರೆ, ಶಾಮಣ್ಣ ಮಾತ್ರ ಕೃಷ್ಣಸ್ವಾಮಿಯ ಮನೆಯಲ್ಲಿ ಎಂದೂ ಇಳಿದು ಕೊಳ್ಳುತ್ತಿರಲಿಲ್ಲ. ಆ ಉಮಾಬಾಯಿಯೊಂದಿಗೆ ಕೃಷ್ಣಸ್ವಾಮಿ ಬಾಳು ನಡಸುತ್ತಿದ್ದುದನ್ನು ನೋಡಿದರೆ ಅವನಿಗೆ ಸಹಿಸುತ್ತಿರಲಿಲ್ಲ.

ಕೆಸರಿನಲ್ಲಿ ಬಿದ್ದವರು ಬಿದ್ದಹಾಗೆಯೇ; ಪ್ರಯತ್ನಪಟ್ಟರೂ ಕಾಲು ಕಿತ್ತು ಹೊರಕ್ಕೆ ಬರುವುದು ಅಸಾಧ್ಯ; ಒಂದು ಕಾಲನ್ನು ಎತ್ತ ಹೋದರೆ ಇನ್ನೊಂದು ಇನ್ನೂ ಒಳಕ್ಕಿಳಿಯುತ್ತದೆ. ಹಾಗೆ ಹೂತು ಹೋದವರನ್ನು ಹೊರಗಿನವರು ಹೊರಕ್ಕೆಳೆಯಲು ಪ್ರಯತ್ನಿಸಬೇಕು. ಆದರೆ, ಮನುಷ್ಯ ಕಾಮುಕತೆಯ ಕೆಸರಿನಲ್ಲಿ ಹೂತುಹೋದರೆ ಅವನು ಮನುಷ್ಯನಾಗಿ ಉಳಿಯುವುದಿಲ್ಲ: ಕೆಸರಿನಲ್ಲಿ ಮುಳುಗಿರುವುದನ್ನೇ ಬಯಸುವ, ಅದರಲ್ಲಿಯೇ ನಲಿಯುವ, ಕೋಣನಾಗಿಬಿಡುತ್ತಾನೆ.

ಕೃಷ್ಣಸ್ವಾಮಿಯನ್ನು ಅವನಿದ್ದ ಕೆಸರಿನಿಂದ ಹೊರಕ್ಕೆಳೆಯಲು ಶಾಮಣ್ಣ ಕಡೆಯ ಸಾಹಸವೊಂದನ್ನು ಮಾಡಿದ.

ಶಾಮಣ್ಣ 'ಅನ್ನಪೂರ್ಣ ವಿಲಾಸ'ದ ಗೋಪಾಲನೊಡನೆ ಸಂಧಾನ ಮಾಡಿ, ಅವನ ಮನವೊಲಿಸಿ, ಉಮಾಬಾಯಿಯನ್ನು ಬೇರೊಬ್ಬ ಶ್ರೀಮಂತ ನಿಗೆ ಪರಿಚಯ ಮಾಡಿಸಿಕೊಟ್ಟ.

ಆ ಶ್ರೀಮಂತ ಕೃಷ್ಣಸ್ವಾಮಿ ಇಲ್ಲದ ವೇಳೆಯಲ್ಲಿ ಅವನ ಮನೆಗೆ ಗೋಪಾಲನೊಡನೆ ಒಂದು ದಿನ ದಾಳಿಯಿಟ್ಟ. ಶ್ರೀಮಂತನ ಸೂಚನೆಗೆ ಉಮಾಬಾಯಿ ಮೊದಲು ಒಪ್ಪಲಿಲ್ಲ: "ನನ್ನನ್ನು ನಂಬಿ ಐದಾರು ವರ್ಷ ಗಳಿಂದ ನನ್ನೊಡನೆ ಬಾಳುವೆ ಮಾಡುತ್ತಿರುವ ಒಳ್ಳೆಯವರನ್ನು ನಾನು

ಬಿಡಲಾರೆ" ಎಂದಳು. "ಅವನು ಒಳ್ಳೆಯವನಿರಬಹುದು. ಆದರೆ ಅವನ ಕೈ ಬರಿದಾದಾಗ ನೀನೇ ಅವನನ್ನ ತೊರೆಯಬೇಕಾಗುತ್ತದೆ. ಈಗಲೇ ಎಚ್ಚರಿಕೆ ತೆಗೆದುಕೊಳ್ಳುವುದು ಮೇಲಲ್ಲವೇ?" ಎಂದು ಶ್ರಿಮಂತನ ಸಲಹೆ "ಕೈ ಬರಿದಾಗುವುದಕ್ಕೆ ಎಂದೂ ಅವರು ಹಣ ಹೊಂದಿದವರಲ್ಲ ಏರಿಳಿತ ವಿಲ್ಲದೆ ನಡೆಯುವ ಈ ಬದುಕು ಹೀಗೆಯೇ ನಡೆಯಲಿ" ಎಂದು ಉಷೆಯ ತೃಪ್ತಿಯ ಉತ್ತರ. "ಒಳ್ಳೆ ಗರತಿಯ ಹಾಗೆ ಮಾತಾಡುತ್ತೀಯಲ್ಲ? ಈ ಬರಡು ಜೀವನಕ್ಕೆ ಯಾಕೆ ಅಂಟಿಕೊಂಡಿರುತ್ತೀಯ?" ಎಂದು ಶ್ರೀಮಂತ ಅವಳಿಗೆ ಅನೇಕ ಪ್ರಲೋಭನಗಳನ್ನು ಒಡ್ಡಿದ್ದ. ತಾನು ಒಂದು ಚಲನ ಚಿತ್ರ ನಿರ್ಮಾಣದ ಸಂಸ್ಥೆಯನ್ನು ಸ್ಥಾಪಿಸಲಿರುವೆನೆಂದೂ ಅದರಲ್ಲಿ ನಿರ್ಮಾಣವಾಗುವ ಚಿತ್ರಗಳಲ್ಲೆಲ್ಲಾ ಅವಳನ್ನು ಪ್ರಮುಖ ತಾರೆಯಾಗಿ ಮಾಡುವೆನೆಂದೂ ಆ ಶ್ರಿಮಂತ ಅವಳಿಗೆ ಆಕರ್ಷಕವಾಗುವ ರೀತಿಯಲ್ಲಿ ಒಂದು ಸುಖ ಸಾಮ್ರಾಜ್ಯದ ಚಿತ್ರವನ್ನು ಚಿತ್ರಿಸಿ, ನಂಬಿಕೆ ಹುಟ್ಟಿಸುವುದ ಕ್ಕಾಗಿ ತನ್ನ ಕೈಯಿನ ಹರಳಿನ ಉಂಗುರವನ್ನು ಅವಳ ಬೆರಳಿಗೆ ತೊಡಿಸಿದ. ಕೃಷ್ಣಸ್ವಾಮಿ ಸಾಕಿದ ಗಿಣಿಯನ್ನು ಬೆಕ್ಕು ಕೊಂಡೊಯ್ದಿತು ಈ ವ್ಯವಹಾರದಲ್ಲಿ ಗೋಪಾಲನಿಗೂ ಲಾಭವಾಗದೆ ಇರಲಿಲ್ಲ; ಶಾಮಣ್ಣನಿಗೆ ಸಂತಸವಾಗದೆಯೂ ಇರಲಿಲ್ಲ.

ಆದರೆ ಕೃಷ್ಣಸ್ವಾಮಿ ದುಃಖಗೊಂಡ: "ವೇಶ್ಯೆಯರೆಲ್ಲ ಹೀಗೆ ಪೇಟೆಯ ಹೂವು ಅವಳು ಹೆಚ್ಚು ಬೆಲೆ ಕೊಟ್ಟವರ ವಸ್ತು ಅವಳು" ಎಂಬ ನಿರ್ಧಾರಕ್ಕೆ ಬಂದ. ಉಷಾಬಾಯಿ ತನ್ನನ್ನು ತ್ಯಜಿಸಿದ ಪ್ರಕರಣದಲ್ಲಿ ಶಾಮಣ್ಣ ಸೂತ್ರಧಾರನಾಗಿದ್ದನೆಂಬ ಅಂಶವಾಗಲಿ ಗೋಪಾಲ ಪ್ರಮುಖ ಪಾತ್ರಧಾರಿಯಾಗಿದ್ದನೆಂಬ ಸಂಗತಿಯಾಗಲಿ ಅವನ ಗಮನಕ್ಕೆ ಬರಲಿಲ್ಲ.

ಎಂದಿನಂತೆ ಅವನು ಅನ್ನಪೂರ್ಣ ವಿಲಾಸದ ಗಿರಾಕಿಯಾದ. ಆದರೆ, ಮನೆಯನ್ನು ಮಾತ್ರ ಬಿಟ್ಟಿರಲಿಲ್ಲ. ಅವನ ಮನಸ್ಸು ತೂಗಾಟಕ್ಕೆ ಸಿಲುಕಿತ್ತು. ಒಂದು ಕಡೆ, ತಾನು ಹಿಂದೆ ನಡಸುತ್ತಿದ್ದ ರೀತಿಯ ಭೋಗ ಜೀವನದ ಮೋಹಕತೆ ಅವನನ್ನು ಕಾಡುತ್ತಿತ್ತು; ಇನ್ನೊಂದು ಕಡೆ, ಅದು ಹೊಲಸು ಜೀವನವಲ್ಲವೇ ಎಂಬ ಭಾವನೆಯೂ ಬಾಧಿಸುತ್ತಿತ್ತು. ಹೆಂಡತಿಯ ಬಳಿಗೆ ಹಿಂತಿರುಗುವುದು, ಅಥವಾ ಅವಳನ್ನು ಕರಸಿ

ಕೊಳ್ಳುವುದು—ಈ ವಿಚಾರ ಅವನ ಮನಸ್ಸಿಗೆ ಹೊಳೆಯದೆ ಇರಲಿಲ್ಲ. ಉಮಾಬಾಯಿ ಅವನನ್ನು ತ್ಯಜಿಸಿ ಹೋದ ಮೇಲೆ ಒಮ್ಮೆ ಶಾಮಣ್ಣನೂ ಈ ವಿಚಾರವನ್ನು ಅವನಲ್ಲಿ ಸೂಕ್ಷ್ಮವಾಗಿ ಪ್ರಸ್ತಾವಿಸಿದನು.

"ನಿನ್ನ ಕೆಲಸಕ್ಕೆ ರಾಜಿನಾಮೆ ಕೊಟ್ಟು ಬಂದುಬಿಡು."

"ಅದು ಸಾಧ್ಯವಿಲ್ಲ"

"ಇಲ್ಲವೆ, ಭಾಗ್ಯಲಕ್ಷ್ಮಿಯನ್ನೆ ಇಲ್ಲಿಗೆ ಕರಸಿಕೊ."

"ಅದೂ ಸಾಧ್ಯವಿಲ್ಲ."

"ಯಾಕೆ?"

"ನಾನು ಅವಳಿಗೆ ದ್ರೋಹ ಮಾಡಿದ್ದೇನೆ. ನನ್ನ ಕೆಟ್ಟ ಬದುಕಿನಿಂದ ಅವಳ ತಿಳಿಯಾದ ಜೀವನವನ್ನು ಕೆಡಿಸಲು ನನಗೆ ಇಷ್ಟವಿಲ್ಲ."

"ಅವಳು ನಿನ್ನನ್ನು ಕ್ಷಮಿಸಲು ಸಿದ್ಧವಾಗಿದ್ದಾಳೆ."

"ನೀನು ನನ್ನನ್ನು ಅರ್ಥ ಮಾಡಿಕೊಂಡಿಲ್ಲ. ನಾನು ನಿಮ್ಮ ಬಲವಂತಕ್ಕೆ ಅವಳೊಡನೆ ಸಂಸಾರ ಮಾಡಲೊಪ್ಪಿದರೂ ನನ್ನ ಮನಸ್ಸು ಬೇರೆಯ ಕಡೆ ಹರಿಯಬಹುದು. ಹೋಟಲಿಗೆ ಹೋಗುವ ಅಭ್ಯಾಸ ಮಾಡಿದವನು ಮನೆಯಲ್ಲಿ ಬೇಕುಬೇಕಾದ ಭಕ್ಷ್ಯಭೋಜ್ಯಗಳನ್ನು ತಿಂದು ತೃಪ್ತಿಗೊಂಡರೂ ಮತ್ತೆ ಹೋಟಲಿಗೆ ಹೋಗುವ ಹಾಗೆ. ಈಗ ಅವಳು ಒಂದು ರೀತಿ ದುಃಖಪಡುತ್ತಿದಾಳೆ; ಆಮೇಲೆ ಇನ್ನೊಂದು ರೀತಿಯ ದುಃಖಕ್ಕೆ ಅವಕಾಶವಾಗಬಹುದು. ಈ ದುಃಖಕ್ಕಿಂತ ಆ ದುಃಖವೇ ಮೇಲು."

ಶಾಮಣ್ಣ ಸ್ವಲ್ಪ ಕಠಿನತೆಯಿಂದಲೇ ಕೇಳಿದ: "ಹಾಗಾದರೆ ಏನು ಮಾಡುತ್ತೀ? ಮೊದಲಿನ ಹಾಗೆಯೇ ಬಾಳನ್ನು ಹಾಳು ಮಾಡಿ ಕೊಳ್ಳುತ್ತೀಯೇನು?"

"ನನ್ನನ್ನು ಮೂರ್ಖನೆಂದು ತಿಳಿಯಬೇಡ. ನಾನೂ ಸ್ವಲ್ಪ ಅನುಭವ ಹೊಂದಿದ್ದೇನೆ. ಕೈ ಸುಟ್ಟುಕೊಂಡಿದ್ದೇನೆ. ತಲೆ ತಾಕಿಸಿಕೊಂಡಿದೇನೆ. ನನ್ನ ಮನಸ್ಸೊಪ್ಪುವ ಹೆಣ್ಣನ್ನು ನನಗೆ ಯಾರಾದರೂ ಇನ್ನು ವಿವಾಹ ಮಾಡಿಕೊಡುತ್ತಾರೆಂಬ ಕನಸು ಕಾಣುತ್ತಿಲ್ಲ ನಾನು. ವೇಶ್ಯೆಯ ಕೊರಳಿಗೆ ತಾಳಿ ಕಟ್ಟಿ ನನ್ನವಳು ಎನ್ನುವ ಹುಸಿ ನೆಚ್ಚಿಕೆಯೂ ನನಗಿಲ್ಲ. ಆದರೂ—"

"ಏನೂ, ಆದರೂ—"

"ಉಮೆಯಂಥವಳು, ಆದರೆ ಅವಳ ಹಾಗೆ ಕುಟಿಲ ಮನಸ್ಕಳಲ್ಲ ದವಳು, ನನಗೆ ದೊರೆತರೆ ಅವಳೊಡನೆ ಬಾಳು ನಡಸುವೆನೇ ಹೊರತು— ನನ್ನ ಹೆಂಡತಿಯ ವಿಚಾರವನ್ನು ಮರೆತುಬಿಡು. ನಾನು ಅವಳನ್ನು ಸಂಪೂರ್ಣವಾಗಿ ಮರೆತಿದೇನೆ. ಎಷ್ಟು ಸಂಪೂರ್ಣವಾಗಿ ಮರೆತಿರುವೆ ನೆಂದರೆ, ಏನು ಮಾಡಿದರೂ ಅವಳ ಮುಖ ನೆನಪಾಗದು. ಅವಳೂ ನನ್ನನ್ನ ಹೀಗೆಯೇ ಮರೆತುಬಿಡಲಿ."

"ನೀನು ವಿಷಸರ್ಪದಲ್ಲಿ ಅಮೃತವನ್ನು ಹುಡುಕುತ್ತಿದೀಯೆ."

"ಹೌದು. ಆದರೆ, ವಿಷಸರ್ಪದಲ್ಲಿ ಅಮೃತವಿಲ್ಲದಿದ್ದರೂ ಹಾವಾಡಿಗರು ಅದನ್ನು ಆಡಿಸಬಲ್ಲರು; ಆ ಆಟವೇ ಅವರಿಗೆ ಆನಂದಕರ."

"ಹಾವಾಡಿಗನಿಗೆ ಹಾವಿನಿಂದಲೇ ಮರಣ ಎನ್ನುತ್ತಾರೆ. ಕೇಳಿ ಬಲ್ಲೆಯೋ?"

"ಎಲ್ಲರಿಗಿಂತ ಚೆನ್ನಾಗಿ ಅವನೇ ಅದನ್ನು ಬಲ್ಲ."

"ತಿಳಿದೂ ತಿಳಿದೂ ಮತ್ತೆ ಹುತ್ತಕ್ಕೆ ಕೈಯಿಡುವೆಯೇನು?"

"ಅದೇ ನನ್ನ ಬದುಕು. ಇನ್ನು ಬದಲಾಯಿಸಲು ಸಾಧ್ಯವಿಲ್ಲ. ನಾನು ಈಗ ಹತ್ತು ಹೆಣ್ಣಿಗಾಗಿ ಬಯಸುತ್ತಿಲ್ಲ; ನನ್ನ ಮನಸ್ಸನ್ನು ಸೂರೆಗೊಂಡು, ನನ್ನೊಡನೆ ಕಡೆತನಕ ಇರಬಲ್ಲ, ಒಂದು ಹೆಣ್ಣಿಗಾಗಿ ಬಯಸುತ್ತಿದೇನೆ."

"ನಿನ್ನಲ್ಲೇನಿದೆ? ಹಿಂದಿನ ರೂಪವಿಲ್ಲ; ಹಣವಿಲ್ಲ; ಪದವಿಯಿಲ್ಲ. ನಿನ್ನನ್ನು ಮೋಹಿಸಿ ಯಾರು ಬರುತ್ತಾರೆ? ನೀನೇ ಹುಡುಕಿಕೊಂಡು ಹೊರಟರೆ, ನಿನಗೆ ಸಿಕ್ಕುವುದು ಬೆಲೆಗೆ ತಕ್ಕ ವಸ್ತು."

"ಅಂಥವಳು ನನ್ನ ಹಾದಿಯಲ್ಲಿ ಕಾಣುವವರೆಗೂ ಕಾದಿರುತ್ತೇನೆ; ಒಂಟಿಯಾಗಿಯೇ ಇರುತ್ತೇನೆ."

"ಈ ಮಾತನ್ನು ಒಪ್ಪಿದೆ. ಇದರಿಂದ ಭಾಗ್ಯಲಕ್ಷ್ಮಿಗೆ ಹರ್ಷವಿಲ್ಲ ವಾದರೂ ನಿನ್ನ ಬದುಕು ಒಂದು ರೀತಿಯಲ್ಲಿ ಒಮ್ಮುಖವಾದಂತಾಗುವುದು."

"ಉಮಾಬಾಯಿ ನನ್ನೊಡನೆ ಇರುವವರೆಗೂ ಹಾಗೆಯೇ ಇತ್ತು. ಮುಂದೂ ಹಾಗೆಯೇ ಇರಬೇಕೆಂದು ನನ್ನ ಆಶೆ. ನೀನು ಧೈರ್ಯವಾಗಿರ ಬಹುದು. ನಾನಾಗಿ ವೇಶ್ಯಾಸಂಬಂಧವನ್ನು ಇನ್ನು ಮಾಡುವುದಿಲ್ಲ.

ತಾನಾಗಿ ಬರುವವಳು ಬಂದರೆ ... ...ಬಂದ ಕಾಲಕ್ಕೆ........"

"ನೀನೇನು ಚಾರುದತ್ತ ಎಂದು ಭಾವಿಸಿಕೊಂಡಿರುವೆಯೋ ?"

"ವಸಂತಸೇನೆಯೊಬ್ಬಳು ಬಂದರೆ ಚಾರುದತ್ತನಾಗಬಲ್ಲೆ."

"ಆಗ ಭಾಗ್ಯಲಕ್ಷ್ಮಿಯನ್ನೂ ಬಿಡುವ ಹಾಗಿಲ್ಲವಲ್ಲ !"

"ಅಂಥ ಉದಾರ ಬುದ್ಧಿಯ ಪ್ರೇಮಪೂರ್ಣಳಾದ ವಸಂತಸೇನೆ ಬಂದಾಗ ಭಾಗ್ಯಲಕ್ಷ್ಮಿಗೂ ಸ್ಥಳ ಕೊಟ್ಟರೂ ಕೊಟ್ಟೆ" ಎಂದು ಕೃಷ್ಣಸ್ವಾಮಿ ನಕ್ಕ. ಶಾಮಣ್ಣನೂ ನಕ್ಕ.

ಈ ಸರಸ ಸಂಭಾಷಣೆಯಾದ ಮೇಲೆ ಒಂದು ವರ್ಷಕಾಲ ಶಾಮಣ್ಣ ಕೃಷ್ಣಸ್ವಾಮಿಯನ್ನು ನೋಡಲಿಲ್ಲ. ಈ ಕಾಲದಲ್ಲಿ ಕೃಷ್ಣಸ್ವಾಮಿ ಒಂದು ರೀತಿಯಲ್ಲಿ ತನ್ನ ಬದುಕಿನ ಹಾದಿಯನ್ನು ನೇರ್ಪಡಿಸಿಕೊಂಡು, ತನ್ನ ಕನಸಿನ ಕೆಳದಿಗಾಗಿ ಹಾದಿ ನೋಡುತ್ತಿದ್ದ.

## ೨೯

ಕೃಷ್ಣಸ್ವಾಮಿಯ ಕನಸು ನನಸಾಗುವ ಅಮೃತಘಳಿಗೆ ಕೂಡಿಬಂತು.

ಕೃಷ್ಣಸ್ವಾಮಿಯ ಮನೆ ಬಿಟ್ಟು ಮೂರು ಮನೆ ಆಚೆ ಒಂದು ಸಣ್ಣ ಮನೆ ಮೂರು ತಿಂಗಳಿಂದಲೂ ತೆರವಾಗಿತ್ತು. ತನ್ನ ಮನೆಗಿಂತ ಅದಕ್ಕೆ ಬಾಡಿಗೆ ಕಡಮೆ ಎಂದು ತಿಳಿದು, ಆ ಮನೆಗೆ ತನ್ನ ನಿವಾಸವನ್ನು ಬದಲಾಯಿಸಲು ಅವನು ಆಲೋಚಿಸುತ್ತಿದ್ದ. ಈ ಮಧ್ಯೆ ಆ ಮನೆಗೆ ಯಾರೋ ಒಕ್ಕಲು ಬಂದರು

ಒಕ್ಕಲು ಬಂದವರು ಯಾರು, ಆ ಸಂಸಾರದಲ್ಲಿ ಎಷ್ಟು ಮಂದಿ, ಈ ಯಾವ ವಿವರಗಳೂ ಅವನಿಗೆ ಮೊದಲು ತಿಳಿದು ಬರಲಿಲ್ಲ. ಆದರೆ, ನಿತ್ಯವೂ ಆ ಮನೆಯ ಮುಂದೆ ಹಾದು ಹೋಗುವ ಇಂಪಾದ ಗಾನ ಅವನ ಕಿವಿಗೆ ಬೀಳುತ್ತಿತ್ತು.

ನಿಜ ನುಡಿಯಬೇಕಾದರೆ, ಅವನಿಗೆ ಕೇಳಿಬಂದ ಗಾನದಲ್ಲಿ ಮೇಲ್ಮಟ್ಟದ ಸಂಗೀತ ಕಲೆ ಅಡಕವಾಗಿರಲಿಲ್ಲ. ಯಾವುದು ಉತ್ತಮ ಮಟ್ಟದ ಸಂಗೀತ, ಯಾವುದು ಅಲ್ಲ ಎಂದು ಪೃಥಕ್ಕರಿಸಿ ಅರಿಯುವಮಟ್ಟಿನ ಸಂಗೀತ

ಜ್ಞಾನವಾಗಲಿ ಸಂಗೀತಾಭಿರುಚಿಯಾಗಲಿ ಕೃಷ್ಣಸ್ವಾಮಿಗಿರಲಿಲ್ಲ. ತಂಬೂರಿಯ ಶ್ರುತಿಗೆ ಹೊಂದಿಕೊಂಡು ಹೊರಹೊಮ್ಮುತ್ತಿದ್ದ ದನಿಯ ಇಂಪು ಸೊಂಪುಗಳು ಅವನ ಚಿತ್ತವನ್ನು ಕವರಿ, ಹೃದಯವನ್ನು ಸೂರೆಗೊಂಡುವು. "ಇಂಥ ನಾದಶ್ರೀಯುನ್ನುಳ್ಳ ನಾರಿ ಯಾವಳೋ" ಎಂದು ಅವನಿಗೆ ಆಚ್ಚರಿಯಾಯಿತು. ಎಲ್ಲಕ್ಕಿಂತ ಹೆಚ್ಚಿನದಾಗಿ, ಸಂಗೀತ ರಸವನ್ನು ಸಿಂಪಡಿಸುತ್ತಿದ್ದ ನುಡಿಗಳು ಕನ್ನಡ! ತಾನು ಹಿಂದೆ ಎಂದೋ ಕೇಳಿ ಮರೆತಿದ್ದ ಕನ್ನಡ ಹಾಡುಗಳು! ಹಾಡುವಾಕೆಯ ಬಗ್ಗೆ ಕೃಷ್ಣಸ್ವಾಮಿಯ ಕುತೂಹಲ ಕೆರಳಿತು. ಆದರೆ, ಆ ಕುತೂಹಲವನ್ನಡಗಿಸಿಕೊಂಡು ಅವನು ಹಾದಿಯಲ್ಲಿ ಮುಂದುವರಿಯುತ್ತಿದ್ದನು.

ಆದರೆ, ಆ ನೆರೆಮನೆಯಿಂದ ಹಗಲಿರುಳೆನ್ನದೆ ನಿರಂತರವಾಗಿ ಕೇಳಿ ಬರುತ್ತಿದ ಹಾಡಿಕೆ ಅವನನ್ನು ಕಾಡತೊಡಗಿತು. ರಾತ್ರಿ ಹತ್ತು ಗಂಟೆಯಾದ ಮೇಲೆ ತಂಸಿಗೆ ಮೈಯೊಡ್ಡುವುದಕ್ಕಾಗಿ ಅವನು ಮಾಳಿಗೆಯನ್ನೇರಿ ಕೆಲಹೊತ್ತು ಹಾಗೆಯೇ ನೆಲದ ಮೇಲೆ ಒರಗಿದಾಗ, ದೂರದ ಕಡಲ ಮೊರೆತವೇ ಕಿವಿಗೆ ಅಸ್ಪಷ್ಟ ಮಧುರವಾದ ಸಂಗೀತದಂತೆ ಭಾಸವಾಗುತ್ತಿದ್ದಾಗ, ಸಮುದ್ರಗೀತವೇ ಸುಯ್ಯೆಲರಿನೊಂದಿಗೆ ಇದ್ದಕ್ಕಿದ್ದ ಹಾಗೆ ಮಾನುಷಗೀತವಾಗಿ ಸುಳಿದು ಬಂದಿತೋ ಎಂಬಂತೆ ನೆರೆಯ ಮನೆಯಿಂದ ನೋಡಲಾಗದ ನಿಲುಕದ ನಾರಿಯ ಗೀತ ರಾತ್ರಿಯ ನಿಶ್ಶಬ್ದತೆಯನ್ನು ಭೇದಿಸಿಕೊಂಡು ಕಿವಿಗೆ ಬೀಳುತ್ತಿದ್ದಿತು.

ಹೀಗೆ ಎಂಟು ಹತ್ತು ದಿನ ಸಾಗಿತು. ಒಂದು ದಿನ, ಆ ಮನೆಯ ಮುಂಬಾಗಿಲಿನಲ್ಲಿ ಒಂದು ಮನೋಹರಾಕೃತಿನಿಂತಿದ್ದು, ವಿದ್ಯುಲ್ಲತೆ ಮಿಂಚಿ ಮಾಯವಾಗುವಂತೆ, ಕೃಷ್ಣಸ್ವಾಮಿ ಅತ್ತ ಕಣ್ಣು ಹೊರಳಿಸಿದ ಕೂಡಲೆ ಕಣ್ಮರೆಯಾಯಿತು. ಆ ರೂಪ ರಾಶಿಯನ್ನು ಮತ್ತೆ ಸಂದರ್ಶಿಸಲು ಅವನು ಹಾತೊರೆಯತೊಡಗಿದನು.

ಅವನ ಬಯಕೆ ನಿಷ್ಫಲವಾಗಲಿಲ್ಲ. ಈಗ ಆ ನಯನಮನೋಹರಿಯಾದ ನಾರಿ ನಾಚಿಕೆಯನ್ನುಳಿದವಳಂತೆ ಮನೆಯ ಬಾಗಿಲಿನಲ್ಲೆ ನಿಂತಿರುತ್ತಿದ್ದಳು. ಅವಳ ನೋಟದಲ್ಲಿ ನಿರೀಕ್ಷೆಯ ಭಾವ ಸ್ಪಷ್ಟವಾಗಿ ಬಿಂಬಿತವಾಗಿತ್ತು. ಕೃಷ್ಣಸ್ವಾಮಿಯೂ ತುಸ ಧೈರ್ಯಮಾಡಿ ಅವಳ ಕಡೆ ತನ್ನ ದೃಷ್ಟಿಯನ್ನು

ಬೀರತೊಡಗಿದನು.

ಆದರೆ ಈಗ ಕೃಷ್ಣಸ್ವಾಮಿಯ ಮನಸ್ಸಿನಲ್ಲಿ ಧೈರ್ಯದೊಂದಿಗೆ ಒಂದು ಅಳುಕೂ ಸೇರಿತ್ತು. ದಿನಕ್ಕೊಂದು ಬಗೆಯಲ್ಲಿ ಅಲಂಕರಿಸಿಕೊಂಡು ಅವಳು ತನ್ನನ್ನೇ ನಿರೀಕ್ಷಿಸುತ್ತಿರುವಳೋ ಎಂಬಂತೆ ಅಲ್ಲಿ ನಿಂತಿರುತ್ತಿದ್ದರೂ ವೇಶ್ಯಾ ಸಹಜವಾದ ಚಪಲತೆಯಾಗಲಿ ಬಿಂಕಬಿನ್ನಾಣಗಳಾಗಲಿ ಹಾವಭಾವ ವಿಲಾಸಗಳಾಗಲಿ ಅವಳ ನಿಲುವಿನ ಭಂಗಿಯಲ್ಲಿ ಕಂಡುಬರುತ್ತಿರಲಿಲ್ಲ— ಅವನಿಗೆ; ಸಾತ್ತ್ವಿಕ ಸೌಂದರ್ಯದ ಸ್ವರ್ಣಪುತ್ಥಳಿಯಾಗಿ, ನೆಲಸಿದ್ದ ಗೃಹವನ್ನು ಬೆಳಗುವ ಗೃಹಲಕ್ಷ್ಮಿಯಾಗಿ, ಕಂಡಳು. ಹಾಡುವಾಕೆಯೂ ಇವಳೇ ಆಗಿದ್ದರೆ ಇವಳನ್ನು ಕೈ ಹಿಡಿದಾತ ಭಾಗ್ಯಶಾಲಿ ಎಂದುಕೊಂಡ ನವನು. "ನಾನು ಕೆಟ್ಟದ್ದಾಯಿತು. ಹೆರರ ಹೆಣ್ಣನ್ನು ಕೆಡಿಸುವ ನೀಚತನ ಮಾತ್ರ ನನಗೆ ಬಾರದಿರಲಿ. ರುಕ್ಮಿಣಿಯನ್ನು ಆಶಿಸಿ ಬವಣೆಪಟ್ಟದ್ದು ಸಾಲದೆ?" ಎಂದು ಅವನು ತನ್ನಲ್ಲಿ ತಾನು ಹೇಳಿಕೊಂಡಿರಬೇಕು. ಅಂತೂ ಆಕೆಯನ್ನು ದಿಟ್ಟಿಸಿ ನೋಡದೆ, ನೋಡಿಯೂ ನೋಡದಂತೆ, ತಲೆ ತಗ್ಗಿಸಿ ನಡೆದು ಹೋಗುತ್ತಿದ್ದನು.

ಆದರೆ, ಒಂದು ಸಂಜೆ, ಹಲವು ವರ್ಷಗಳ ಚಾಳಿಯಿಂದ ಅವನಲ್ಲಿ ರಕ್ತಗತವಾಗಿದ್ದ ಸ್ತ್ರೀ ವ್ಯಾಮೋಹ ಆ ಮುಗ್ಧ ಮನೋಹಾರಿಣಿಯ ಮುಗುಳುನಗೆಯೊಂದರಿಂದ ಪ್ರಕೋಪಗೊಂಡಿತು. "ನನ್ನನ್ನೇ ಕುರಿತು ನಗೆ ಬೀರಿರಬಹುದೆ?" ಎಂಬ ಸುಮಧುರ ಸಂದೇಹ ಅವನನ್ನು ಕಾಡಿತು. ಮಾರನೆಯ ಸಂಜೆಯೂ ಅದೇ ನಗೆ, ಮತ್ತೆ ಮತ್ತೆ ಅದೇ ಸಂದೇಹ. ನಿತ್ಯವೂ ಇದೇ ನಾಟಕ ಮುಂದುವರಿದಾಗ, ಈ ಸಂದೇಹ ಸಾಮ್ರಾಜ್ಯದ ಸಾರ್ವಭೌಮ ಪದವಿ ಅವನಿಗೆ ಸಹಿಸಲು ಅಸಾಧ್ಯವಾಯಿತು. ಜೀವನ ನಾಟಕದಲ್ಲಿ ಅವಳು ರಾಣಿಯೆನಿಸಿ ತಾನು ಅವಳ ದಾಸನಾದರೂ ಸಾಕೆನಿಸಿತು.

ಎಂಟು ಹತ್ತು ದಿನ ಹೀಗೆ ನಡೆಯಿತು ಕೃಷ್ಣಸ್ವಾಮಿಯ ತಾಳ್ಮೆ ತೀರಿಹೋಯಿತು. ಅವನು ಹುಚ್ಚುಧೈರ್ಯದ ದಾಸನಾದ. ಮನೆಯ ಬಾಗಿಲನ್ನು ಸಮೀಪಿಸಿ, "ಈ ಮನೆ ಮೊದಲು ಖಾಲಿಯಾಗಿತ್ತು. ಈಗಲೂ ಯಾರೋ ಖಾಲಿ ಎಂದು ತಿಳಿಸಿದರು. ಮನೆಯವರು ನೀವೇಯೋ?"

ಎಂದು ತಮಿಳಿನಲ್ಲಿ ಪ್ರಶ್ನಿಸಿದನು. ಕ್ಷಣಕಾಲ ಉತ್ತರ ಬಾರದಿರಲು ಅದೇ ಪ್ರಶ್ನೆಯನ್ನು ತೆಲುಗಿನಲ್ಲಿ ಕೇಳಿದನು.

"ನನಗೆ ತಮಿಳು ಬಾರದು ತೆಲುಗೂ ಬಾರದು; ಆದರೆ ಕೊಂಚ ಅರ್ಥವಾಗುತ್ತೆ. ಸದ್ಯದ ಮಟ್ಟಿಗೆ ಮನೆಯವರು ನಾವೇ" ಎಂದು ತಲೆ ತಗ್ಗಿಸಿ, ನಾಚಿಕೆಯನ್ನು ನಟಿಸುತ್ತ, ನುಡಿದಳಾಕೆ—ಆ ಅಪರಿಚಿತೆ.

"ಓಹೋ! ನೀವು ಕನ್ನಡಿಗರು. ನಾನೂ ಕನ್ನಡಿಗ."

"ಹಾಗಾದರೆ, ನಮ್ಮವರೇ ಆಯಿತು."

"ಅಂತೂ ಈ ಮನೆ ಖಾಲಿ ಇಲ್ಲ ಎನ್ನಿ."

"ಒಬ್ಬಳೇ ವಾಸ ಮಾಡುವ ಮನೆಯನ್ನ ಖಾಲಿ ಎಂದೇ ಹೇಳಬಹುದೇನೊ" ಎಂದು ನಕ್ಕಳಾಕೆ.

ಕೃಷ್ಣಸ್ವಾಮಿ ಅಪರಿಚಿತೆಯಿಂದ ಇಷ್ಟೊಂದು ಸಲಿಗೆಯನ್ನು ನಿರೀಕ್ಷಿಸಿರಲಿಲ್ಲ. ನೀರು ಬಯಸಿದವನಿಗೆ ಪಾನಕ ನೀಡಿದಂತಾಯಿತು!

"ಅಂದರೆ........ನೀವು .. ...."

"ನಾವು........ಈ ಊರಿಗೆ ಹೊಸಬರು."

"ಅಂದರೆ ...ಅದು ಸರಿ ...ಅಂದರೆ ...ನೀವು ಒಬ್ಬರೇ ..."

"ಹೌದು. ಕೃಪೆ ಮಾಡಬೇಕಾದವರು ಇನ್ನೂ ಕೃಪೆ ಮಾಡಿಲ್ಲ."

"ಅದು ದೊಡ್ಡ ಮಾತು. ನಿಮ್ಮಂಥವರ ಕೃಪೆ........"

"ಗತಿಗೆಟ್ಟವಳಿಗೆ ಬಹುವಚನದ ಗೌರವ ಯಾಕೆ? 'ನೀನು' ಎಂದರೆ ನನ್ನ ಭಾಗ್ಯ."

ಆ ರಮಣಿಯ ಕಣ್ಣು ತುಸ ತೇವವಾದದ್ದು ಕಾತುರನಾದ ಕೃಷ್ಣಸ್ವಾಮಿಯ ಗಮನಕ್ಕೆ ಬರಲಿಲ್ಲ.

"ನಿನ್ನವಳು ಎಂದರೆ ನನ್ನ ಭಾಗ್ಯ"—ಎಂದನವನು.

"ಅದನ್ನು ನೀವು ಇನ್ನೂ ಅರಿತುಕೊಳ್ಳದೆ ಇರುವುದು ನನ್ನ ದೌರ್ಭಾಗ್ಯ."

"ಮನೆಯೊಳಗೆ ಮಾತಾಡಬಹುದಲ್ಲವೆ?"

"ಈ ಮನೆ ಬರಿದು. ನೀವು ಬಂದು ಅದನ್ನ ತುಂಬಬೇಕು, ಬೆಳಗಬೇಕು. ಮನೆ ನಿಮ್ಮದು."

ಕೃಷ್ಣಸ್ವಾಮಿಗೆ ಇದು ಕನಸೋ ನನಸೋ ಎನ್ನುವಂತಾಯಿತು. ಮನೆಯನ್ನು ಪ್ರವೇಶಿಸಿ, ಸರಳ ರೀತಿಯಲ್ಲಿ ಸುಸಜ್ಜಿತವಾಗಿದ್ದ ಸಣ್ಣ ಹಜಾರದಲ್ಲಿ ಕುರ್ಚಿಯ ಮೇಲೆ ಕುಳಿತನು.

ಅಪರಿಚಿತೆ ಅಡಿಗೆಯವನನ್ನು ಕೂಗಿ ಕರೆದಳು.

"ಮನೆಗೆಲ್ಲಾ ನಾನೊಬ್ಬಳೇ ಎಂದು ಹೇಳಿದೆ?" ಸಲಿಗೆ ವಹಿಸಿ ಕೃಷ್ಣಸ್ವಾಮಿ ಕೇಳಿದನು.

"ಅಡಿಗೆಯನೊಬ್ಬನಿದಾನೆ, ಅಷ್ಟೆ."

ಅಡಿಗೆಯವನು ಬಂದನು.

"ರಾಮಾಚಾರ್‍ರೆ, ಬೇಗ ಒಂದು ಲೋಟ ಕಾಫಿ ಮಾಡಿಕೊಂಡು ಬನ್ನಿ."

ಇನ್ನೊಬ್ಬ ಪುರುಷನಿರುವನೆಂದು ಕೃಷ್ಣಸ್ವಾಮಿ ಹೆಚ್ಚಾಗಿ ಬಾಯಿ ಬಿಡಲಿಲ್ಲ. ಮನೆಯಾಕೆಯೂ ಗಂಭೀರ ಮೌನವಾಗಿದ್ದಳು.

ಕಾಫಿ ತಂದುಕೊಟ್ಟು, ಒಡತಿಯ ಅಣತಿಯಂತೆ ಅಡಿಗೆಯವನು ಹೊರಟು ಹೋದ.

ಇಬ್ಬರ ಮಾತುಕತೆ ನಿರಾತಂಕವಾಗಿ ಸಾಗಿತು.

"ನಿನ್ನ ಹೆಸರೇನು?"

"ಲೀಲಾವತಿ ಎಂದು ಕರೆಯಿರಿ."

"ಲೀಲಾವತಿ....ಲೀಲಾ. ನನ್ನ ಹೆಸರು...."

"ನನಗೆ ಗೊತ್ತಿದೆ."

"ನಿನಗೆ ಗೊತ್ತಿದೆಯೆ!"

"ಹೆಸರು ಮಾತ್ರವಲ್ಲ. ನಿಮ್ಮ ವಿಚಾರವೆಲ್ಲ ಗೊತ್ತು."

"ನಿಜವಾಗಿ!"

"ನಿಜವಾಗಿ."

"ಹೇಗೆ ಗೊತ್ತಾಯಿತು?"

"ಅದು ಯಾರೋ ಗೋಪಾಲನಂತೆ, ನೀವು ಊಟ ಮಾಡುವ ಹೋಟಲಿನ ಮಾಣಿ. ನಮ್ಮ ರಾಮಾಚಾರ್‍ರೂ ಅವನೂ ಒಂದೇ ಊರಿನವರಂತೆ. ಅವರ ಮೂಲಕ ತಿಳಿಯಿತು."

"ಓಹೋ, ಹೀಗೋ! ನನ್ನಲ್ಲಿ ಏನಿದೆ ಅಂತ ನೀನಾಗಿ ನನ್ನ ಸೆಳೆದದ್ದು?"

"ಬೇಕಾದದ್ದೆಲ್ಲ ಇದೆ. ಒಬ್ಬ ಗಂಡ ಬಿಟ್ಟವಳನ್ನು ಕೆಲವು ಕಾಲ ಸಲಹಿದಿರಿ. ಇನ್ನೊಬ್ಬಳು ಗಂಡ ಬಿಟ್ಟವಳನ್ನು ಕೈ ಹಿಡಿದು ಉದ್ಧಾರ ಮಾಡುವ ಆಶೆ, ನಂಬಿಕೆ."

"ಹಾಗಾದರೆ ನೀನು .. ..."

"ವೇಶ್ಯೆಯಲ್ಲ."

"ನನ್ನ ಸಂಬಂಧ ಉಂಟಾದರೆ ಆಗುತ್ತೀಯೆ!"

"ಇಲ್ಲ. ನಿಮ್ಮನ್ನು ಪತಿಯಂತೆ ತಿಳಿದಿರುವುದರಿಂದ ಆ ಕಳಂಕ ತಟ್ಟುವುದಿಲ್ಲ"

ಕನಸಿನ ಕೆಳದಿ ಕಣ್ಣೆದುರು ಸುಳಿದಳೆಂದು ಕೃಷ್ಣಸ್ವಾಮಿ ಹಿಗ್ಗಿದನು.

ಪ್ರತಿದಿನ ಸಂಜೆಯೂ ಇವರ ಪರಸ್ಪರ ಸಂದರ್ಶನವಾಗುತ್ತಲೇ ಇದ್ದಿತು. ಕೇವಲ ಸರಸ ಸಂಭಾಷಣೆ, ಸಂಗೀತ, ಸತ್ಕಾರ—ಇವುಗಳಿಂದಲೇ ಸಂತೃಪ್ತನಾಗದ ಕೃಷ್ಣಸ್ವಾಮಿಗೆ ಲೀಲಾವತಿ ಅರ್ಥವಾಗದ ಸಮಸ್ಯೆಯಾದಳು.

"ಲೀಲಾ, ನಿನ್ನಲ್ಲಿ ರೂಪಲಾವಣ್ಯ, ಸರಸವಾದ ಮಾತುಕತೆ, ಸಂಗೀತ ಸಾಹಿತ್ಯ ಜ್ಞಾನ ಎಲ್ಲ ಕೂಡಿವೆ. ಆದರೂ ನಿನ್ನ ಪೂರ್ಣಪ್ರೇಮವನ್ನು ನೀನು ನನಗೇನ್ನೂ ನೀಡಿಲ್ಲ. ಅದೇಕೆ ಹೀಗೆ ಕಾಡುವೆ?" ಎಂದು ಒಂದು ದಿನ ಕೃಷ್ಣಸ್ವಾಮಿ ಅವಳನ್ನು ದೀನನಾಗಿ ಬೇಡಿಕೊಂಡನು.

"ಆ ಪೂರ್ಣಪ್ರೇಮಕ್ಕೆ ನಾನು ಕೇಳುವ ಬೆಲೆಯನ್ನು ನೀವು ಕೊಡಬಲ್ಲಿರಾ?"

"ನಾನು ಶ್ರೀಮಂತನಲ್ಲವೆಂದು ನಿನಗೂ ತಿಳಿದಿದೆ. ಬಡವ ಕೊಡಲಾಗದಷ್ಟು ಬೆಲೆ ಕೇಳಿದರೆ ನಾನು ನನ್ನ ಬ್ಯಾಂಕಿನ ದರೋಡೆಮಾಡಬೇಕಷ್ಟೆ."

"ನಾನು ಬೇಡುವುದು ಧನವನ್ನಲ್ಲ."

"ಹಾಗಾದರೆ, ಏನನ್ನ?"

"ನಿಮ್ಮನ್ನ."

"ನಾನು ನಿನ್ನ ದಾಸ ಎಂದು ಮತ್ತೆ ಮತ್ತೆ ಹೇಳಬೇಕೆ?"

" ಅದು ದೊಡ್ಡ ಮಾತು. ನಾನು ನಿಮ್ಮ ಚರಣ ದಾಸಿ."

" ಹೀಗೆ ಹೇಳಿ ಹಾಗೆ ನಡೆಯುವುದೇಕೆ ?"

" ಹೇಗೆ ನಡೆದುಕೊಳ್ಳಬೇಕೆಂದು ನೀವು ಬಯಸುವಿರೋ ಹಾಗೆ ನಡೆದುಕೊಳ್ಳಬೇಕಾದರೆ, ನಾನು ಹೇಳಿದ ಹಾಗೆ ನೀವು ನಡೆದುಕೊಳ್ಳಬೇಕು."

" ಅದು ಹೇಗೆ ?"

" ನಾನು ವಿಧಿಸುವ ಕಟ್ಟುಪಾಡಿಗೆ ಒಳಪಡಬೇಕು."

" ಅದು ಏನು ?"

" ನಾನು ಹೋದಲ್ಲಿಗೆ ಬರಬೇಕು."

" ಆಗಬಹುದು "

" ಇದು ಹುಸಿನಂಬಿಕೆಯೋ ಪ್ರಮಾಣವಚನವೋ? "

" ನನ್ನಾಣೆ; ನಿನ್ನಾಣೆ; ದೇವರಾಣೆ."

" ನಿಮಗೆ ದೇವರಲ್ಲಿ ನಂಬಿಕೆಯಿದೆಯೇ ?"

" ಇದುವರೆಗೆ ನಾನು ದೇವರನ್ನು ಕಂಡಿರಲಿಲ್ಲ. ಇಂದು ಕಂಡೆ."

" ಎಲ್ಲಿ ?"

" ನಿನ್ನ ಪ್ರೇಮದಲ್ಲಿ."

" ಹಾಗಾದರೆ ಕೊಟ್ಟ ಮಾತನ್ನು ನಡಸುವಿರೋ ?"

" ಖಂಡಿತವಾಗಿ."

" ಹಾಗಾದರೆ ಮುಂದಿನ ವಾರ ಪ್ರಯಾಣ."

" ಎಲ್ಲಿಗೆ ?"

" ನಾನು ಹೋದಲ್ಲಿಗೆ."

ಕೃಷ್ಣಸ್ವಾಮಿ ಲೀಲಾವತಿಯನ್ನು ಮೈಸೂರಿಗೆ ಹಿಂಬಾಲಿಸಬೇಕಾಯಿತು. ಅದು ಅವನಿಗೆ ಇಷ್ಟವಿರಲಿಲ್ಲ. ಆದರೂ, ಅವಳ ದಾಸನಾಗಿ ಹಿಂಬಾಲಿಸಿದನು.

ಮೈಸೂರಿನಲ್ಲಿ ರೈಲಿಳಿದ ಮೇಲೆ ಕೃಷ್ಣಸ್ವಾಮಿಯನ್ನೂ ಲೀಲಾವತಿಯನ್ನೂ ಕೂರಿಸಿಕೊಂಡಿದ್ದ ' ಷಾಃ ಪಸಂದ್ ' ಗಾಡಿ, ಅವಳ ಸೂಚನೆಯ ಮೇರೆಗೆ, ಶಿವರಾಮಪೇಟೆಯಲ್ಲಿ ಅವನ ಮಾವನವರ ಬೀದಿಯನ್ನು ಹೊಕ್ಕಾಗ ಅವನ ಎದೆ ಡವಡವಗುಟ್ಟುತ್ತಿತ್ತು. ರಾತ್ರಿಯ ಕತ್ತಲೆ,

ಯಾರೂ ಕಾಣರು ಎಂಬ ಒಂದು ಸಮಾಧಾನ. ಗಾಡಿ ಅವನ ಮಾವನವರ ಮನೆಯನ್ನು ಬಿಟ್ಟು ನಾಲ್ಕು ಮಾರು ಮುಂದೆ ಹೋದಾಗ ಅವನಿಗೆ ಹೆಚ್ಚಿನ ಸಮಾಧಾನವಾಯಿತು.

ಮನೆಯ ಬಾಗಿಲು ತೆರೆದೇ ಇತ್ತು. ಕೃಷ್ಣಸ್ವಾಮಿಗೆ ಆಶ್ಚರ್ಯವಾಯಿತು. ಇಬ್ಬರೂ ಮನೆಯನ್ನು ಪ್ರವೇಶಿಸಿದರು. ಕೃಷ್ಣಸ್ವಾಮಿ ವಿಶ್ರಾಂತಿ ಪಡೆಯಲು ಹಾಸಿದ್ದ ಜಮಖಾನೆಯ ಮೇಲೆ ಕುಳಿತನು. ಲೀಲಾವತಿ ಒಳಕ್ಕೆ ಹೋಗಿ ಉಡುಪು ಬದಲಾಯಿಸಿ ಬಂದು ಎದುರಿನಲ್ಲಿ ನಿಂತಿದ್ದಳು. ಎದುರಿಗೆ ನಿಂತಿದ್ದ ವಳು ಲೀಲಾವತಿಯಾಗಿರಲಿಲ್ಲ. ಖಾದಿ ಸೀರೆಯನ್ನುಟ್ಟು ಅವನ ಭಾಗ್ಯ ದೇವತೆಯಂತೆ ಒಪ್ಪುತ್ತಿದ್ದ ಭಾಗ್ಯಲಕ್ಷ್ಮಿಯಾಗಿದ್ದಳು. ಆದರೆ, ಅವನಿಗೆ ಮಾತ್ರ ಹಾಗೆಂದು ತಿಳಿಯಲಿಲ್ಲ.

"ಇದೂ ನಿನ್ನ ಮನೆಯೆ?"

"ಇದೇ ನನ್ನ ಮನೆ, ನಿಮ್ಮ ಮನೆ."

"ಇದೇನು, ವೇಷ ಬದಲಾವಣೆ, ಈ ನಾಟಕ? ಇಲ್ಲಿ ಬೇರೆ ಯಾರೋ ಇರುವಂತಿದೆ? ನನಗೆ ಅರ್ಥವೆ ಆಗುವುದಿಲ್ಲ."

ಶಾಮಣ್ಣ, ಒಳಗಿನಿಂದ ಒಂದು ಲೋಟದಲ್ಲಿ ಕಾಫಿ ಹಿಡಿದುಕೊಂಡು ಬಂದ:

"ನಾಟಕದಲ್ಲಿ ಇದು ಕಡೆಯ ದೃಶ್ಯ: 'ಟ್ರಾನ್ಸ್‌ಫರ್ ಸೀನು'. ಇವಳು ಲೀಲಾವತಿಯಲ್ಲ; ಭಾಗ್ಯಲಕ್ಷ್ಮಿ. ನೀನು ಸೀನೇ. ನಾನು ಗತ್ಯಂತರವಿಲ್ಲದೆ ಕಾಣಿಸಿಕೊಳ್ಳಬೇಕಾಗಿ ಬಂದ ಸೂತ್ರಧಾರ."

ಭಾಗ್ಯಲಕ್ಷ್ಮಿ ಹೋಗಿ ಪತಿಯ ಪಾದಗಳಿಗೆ ಎರಗಿದಳು. ಅವಳ ಕಣ್ಣೀರು ಅವನ ಪಾದಗಳನ್ನು ತೊಳೆದು ಪವಿತ್ರಮಾಡಿತು.

ಆ ಕೂಡಲೆ, ಮೊದಲೇ ಏರ್ಪಾಡಾಗಿದ್ದಂತೆ, ನಾರಾಯಣಮೂರ್ತಿ ಗಳೂ ಜಯಲಕ್ಷಮ್ಮನವರೂ ಶ್ಯಾಮಸುಂದರನನ್ನು ಕರೆದುಕೊಂಡು ಒಳಕ್ಕೆ ಬಂದರು.

ಹೊಸಹುಟ್ಟು ಪಡೆದವನಂತೆ, ಹಿಂದಿನದೆಲ್ಲಾ ಪೂರ್ವಜನ್ಮದ ಸ್ಮರಣೆ ಯಂತೆ ಜಾರಿಹೋಗಿ, ಪುನರ್ಜನ್ಮ ಹೊಂದಿದ್ದ ಕೃಷ್ಣಸ್ವಾಮಿ ಭಾವಪರ ವಶನಾಗಿ ಎದ್ದು, "ನನ್ನ ಅಪರಾಧಗಳನ್ನೆಲ್ಲಾ ಕ್ಷಮಿಸಬೇಕು" ಎಂದು

ಅತ್ತೆ ಮಾವಂದಿರ ಕಾಲುಗಳ ಮೇಲೆ ಬಿದ್ದನು. ಅವನ ಕಣ್ಣಿಂದ ಕೆಲವು ಕಂಬನಿಗಳುದುರಿ ಮಾತು ಮಾಡಲಾಗದ ಕಾರ್ಯವನ್ನು ಮಾಡಿದುವು.

## ೩೦

## ಮುಗಿತಾಯ

ಕಥೆ ಇಲ್ಲಿಗೆ ಮುಗಿದಂತೆ. ನಿಜವಾಗಿ ನಡೆದ ಸಂಗತಿಯನ್ನೆ ನಾನು ಸ್ವಲ್ಪ ನಾಟಕೀಯವಾಗಿ ಮುಗಿಸಿದ್ದರೆ ವಾಚಕರು ನನ್ನನ್ನು ಮನ್ನಿಸಬೇಕು. ಜೀವನ ನಾಟಕದಲ್ಲಿ ಯಾವುದೂ ಅಸಂಭವವಲ್ಲ. ಜೀವನದಲ್ಲಿ ಅಸಂಭವವಲ್ಲದ್ದು ಈ ಕಥೆಯಲ್ಲಿ ಅಸಂಭವವಾಗಿ ಕಾಣಬಹುದು. "ಹೀಗೆ ನಡೆಯಬಹುದೆ?" ಎಂದು ನನ್ನನ್ನು ಕೇಳಬೇಡಿ "ನಡೆಯಿತೆ" ಎಂದರೆ, "ಹೌದು" ಎನ್ನುತ್ತೇನೆ. ಇಷ್ಟರಿಂದ ನೀವು ತೃಪ್ತರಾಗಬೇಕು.

ಇನ್ನು ಒಂದು ಸಂಗತಿ ತಿಳಿಸಿ, ಸಪ್ಪೆಯಾದ ರೀತಿಯಲ್ಲಿಯೇ ಕಥೆಯನ್ನು ಮುಗಿಸಬೇಕಾಗಿದೆ

ಭಾಗ್ಯಲಕ್ಷ್ಮಿಯ ಪ್ರಭಾವದಿಂದ ಕೃಷ್ಣಸ್ವಾಮಿ ಖಾದಿ ಭಕ್ತನಾದ; ಶಾಮಣ್ಣನ ಸಲಹೆಯಂತೆ, ತನ್ನ ಮದರಾಸಿನ ಕೆಲಸಕ್ಕೆ ರಾಜೀನಾಮೆ ಕೊಟ್ಟು, ಅವನ ಅಂಗಡಿಯನ್ನು ಇವನೇ ವಹಿಸಿಕೊಂಡ.

ಚಂದ್ರಶೇಖರಯ್ಯ, ರುಕ್ಮಿಣಿ ಮತ್ತು ಅವರ ಇಬ್ಬರು ಮಕ್ಕಳೊಂದಿಗೆ ನಾನು ಮೈಸೂರಿಗೆ ಹೋಗಿದ್ದೆ: ಶ್ಯಾಮಸುಂದರನ ಉಪನಯನಕ್ಕೆ. ಈ ಸಲ ಮನಃಪೂರ್ವಕವಾಗಿ ಎಲ್ಲರೆದುರಿಗೆ ಕೃಷ್ಣಸ್ವಾಮಿ ಕೊಟ್ಟ ಉಡುಗೊರೆಯನ್ನು ರುಕ್ಮಿಣಿ ಸಂತೋಷದಿಂದ ಸ್ವೀಕರಿಸಿದಳು: ಅದು ಆ ರೇಷ್ಮೆ ಸೀರೆಯಲ್ಲ; ನೊಗಸಾದ ಖಾದಿಯ ಸೀರೆ.

ದೇಶದಲ್ಲಾದ ೧೯೪೨ ರ ಸ್ವಾತಂತ್ರ್ಯದ ಚಳುವಳಿಗೆ ನುಗ್ಗಬೇಕೆಂದು ಕೃಷ್ಣಸ್ವಾಮಿಯ ಮನಸ್ಸು. ಆದರೆ, ರಿಟೈರಾಗಿದ್ದ ನಾರಾಯಣಮೂರ್ತಿಗಳು ತಮ್ಮ ಮುಪ್ಪಿನಲ್ಲಿ ತಮ್ಮ ಅಳಿಯನನ್ನು ದೇಶಸೇವೆಗೆ ಬಿಟ್ಟುಕೊಡಲಿಲ್ಲ. "ಖಾದಿಯ ವ್ರತ ಒಂದನ್ನು ಬಿಡದೆ ನಡಸೋಣ. ದೇಶನಾಯಕರ

ಬಿಡುಗಡೆಗಾಗಿಯೂ ಸ್ವಾತಂತ್ರ್ಯಕ್ಕಾಗಿಯೂ ದೇವರಲ್ಲಿ ನಿತ್ಯ ಪ್ರಾರ್ಥಿಸೋಣ. ಇಷ್ಟೇ ನಮ್ಮ ಕೈಲಾಗುವ ದೇಶಸೇವೆ. ನಮ್ಮ ಪರವಾಗಿ ಶಾಮಣ್ಣನಿದ್ದಾನಲ್ಲ, ಸಾಕು" ಎಂಬ ಭಾಗ್ಯಲಕ್ಷ್ಮಿಯ ನುಡಿಗಳಿಗೆ ಅವನು ಸೋತ.

ಶ್ಯಾಮಸುಂದರ ಶಾಲೆಯ ಹರತಾಳಗಳಲ್ಲಿ, ಬೀದಿಯ ಮೆರೆವಣಿಗೆಗಳಲ್ಲಿ, ಮುಂದಾಳು. ತಾಯಿ ಹೊತ್ತಿಸಿದ್ದ ದೇಶಪ್ರೇಮ ಅವನಲ್ಲಿ ಬೆಳಗುತ್ತಿತ್ತು. "ಗಾಂಧೀಕಿ ಜೈ! ಭಾರತಮಾತಾಕಿ ಜೈ!!" ಎಂಬ ಅವನ ಘೋಷಣೆ ತಾಯ ಹೃದಯಕ್ಕೆ ನಲಿವು ತರುತ್ತಿತ್ತು.



ಶ್ರೀ ರಂಗನಾಥ ಪ್ರೆಸ್, ಸುಲ್ತಾನಪೇಟೆ ಬೆಂಗಳೂರು ೨.